# ಮಹಿಳಾ ಅಧ್ಯಯನದ ಮಾದರಿಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧಕಿ

**ಬಿ.ವಿ.ತೇಜಸ್ವಿನಿ**

ಮಾರ್ಗದರ್ಶಕರು

**ಡಾ. ವೈ.ಡಿ.ಲೀಲಾ**





**ಕರ್ನಾಟಕ ಸಂಘ (ರಿ)., ಮಂಡ್ಯ.**

ಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮



304

304

# ಮಹಿಳಾ ಅಧ್ಯಯನದ ಮಾದರಿಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧಕಿ

**ಟಿ.ವಿ.ತೇಜಸ್ವಿನಿ**

ಮಾರ್ಗದರ್ಶಕರು

**ಡಾ. ವೈ.ಡಿ.ಲೀಲಾ** ಎಂ.ಎ.ಪಿ.ಎಚ್.ಡಿ

ಕನ್ನಡ ಪ್ರಾಧ್ಯಾಪಕರು

ಪಿ.ಇ.ಎಸ್.ವಿಜ್ಞಾನ ಕಾಲೇಜು, ಮಂಡ್ಯ









**ಕರ್ನಾಟಕ ಸಂಘ (ರಿ)., ಮಂಡ್ಯ.**

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

''ಮಹಿಳಾ ಅಧ್ಯಯನದ ಮಾದರಿಗಳು'' ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶ್ರೀ ಮತಿ ಟಿ.ವಿ.ತೇಜಸ್ವಿನಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂದದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ
ದಿನಾಂಕ: ೧೦/೦೭/೨೦೦೮

(ಡಾ॥ ವೈ.ಡಿ.ಲೀಲಾ ಎಂ.ಎ.,ಪಿ.ಎಚ್.ಡಿ)
ಕನ್ನಡ ಪ್ರಾಧ್ಯಾಪಕರು
ಪಿ.ಇ.ಎಸ್.ವಿಜ್ಞಾನ ಕಾಲೇಜು,
ಮಂಡ್ಯ

ಡಾ॥ ವೈ.ಡಿ. ಲೀಲಾ
ಕನ್ನಡ ಪ್ರಾಧ್ಯಾಪಕರು
ಪಿ.ಇ.ಎಸ್. ವಿಜ್ಞಾನ ಕಾಲೇಜು, ಮಂಡ್ಯ

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಶ್ರೀಮತಿ ಟಿ.ವಿ.ತೇಜಸ್ವಿನಿ, ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ''**ಮಹಿಳಾ ಅಧ್ಯಯನದ ಮಾದರಿಗಳು**'' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ॥ ವೈ.ಡಿ.ಲೀಲಾ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ. ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ

ದಿನಾಂಕ: 10/09/2008

ತೇಜಸ್ವಿನಿ ಟಿ.ವಿ.

(ಶ್ರೀಮತಿ ಟಿ.ವಿ.ತೇಜಸ್ವಿನಿ)

ಕನ್ನಡ ಎಂ.ಫಿಲ್ ಅಭ್ಯರ್ಥಿ

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,

ಕರ್ನಾಟಕ ಸಂಘ (ರಿ)., ಮಂಡ್ಯ.

## ಪರಿವಿಡಿ




ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಅಧ್ಯಾಯ:೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

# ಅಧ್ಯಾಯ: ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯನಿಗೆ ಅನ್ಯರಿಂದ ಶೋಷಣೆ ಹಾಗೂ ಕೀಳು ಸ್ಥಾನಮಾನಗಳು ಉಂಟಾದಾಗ ದುಸ್ಥಿತಿಗೆ ಒಳಗಾದ ಜನರೆಲ್ಲ ಸಂಘಟಿತರಾಗಿ ತಮ್ಮ ಕುಂಟಿತವಾದ ಸ್ಥಿತಿಗೆ ಕಾರಣವಾದ ಸಂಗತಿಗಳ ವಿರುದ್ಧ ಪ್ರತಿಭಟಿಸಲು ಹಾಗೂ ತಮ್ಮ ಸ್ಥಾನಮಾನಗಳನ್ನು ಉತ್ತಮ ಪಡಿಸಿಕೊಳ್ಳಲು ಒಗ್ಗೂಡುವುದೇ ಚಳುವಳಿಗಳ ಅಥವಾ ಹೋರಾಟದ ಉಗಮಕ್ಕೆ ಕಾರಣಗಳಾಗುತ್ತವೆ. ಹೀಗೆ ಹುಟ್ಟುವ ಚಳುವಳಿಗಳು ಒಂದು ಸ್ಪಷ್ಟತೆ ಕಂಡುಕೊಂಡು ನಿರ್ದಿಷ್ಟ ಉದ್ದೇಶ ಮತ್ತು ಗುರಿ ಸಾಧನೆಗಾಗಿ ಶ್ರಮಿಸಬೇಕಾಗುತ್ತದೆ. ಇದರೊಟ್ಟಿಗೆ ಅಧ್ಯಯನವು ಸಹ ಶಾಸ್ತ್ರ ಬದ್ಧವಾಗಿ ನಡೆಯಬೇಕಾಗುತ್ತದೆ.

**ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುವುದು ಲೇಸು**

**ಮಣ್ಣೀನ ಮ್ಯಾಲ ಮರವಾಗಿ, ಇದ್ದರ**

**ಬಂದವರಿಗೆಲ್ಲ ನೆರಳವ್ವ॥**

ಈ ಜನಪದ ಹಾಡಿನಲ್ಲಿ ಹೆಣ್ಣಿನ ನೋವು ಕೊನೆಯಿಲ್ಲದ್ದು. ಇಂದಿನ ಜಾಗತೀಕರಣದ ವ್ಯವಸ್ಥೆಯಲ್ಲಿ ಪರಮಾಣು ವಿಜ್ಞಾನ ಯುಗದ ಮುನ್ನಡೆಯಲ್ಲಿ ಪುರುಷರಿಗೆ ಸರಿಸಾಟಿಯಾಗಿ ನಿಂತ ಮಹಿಳೆಯರಿದ್ದಾರೆ. ಈ ಒಂದು ಅಂತರ ಅಥವಾ ವಿಶಾಲ ವ್ಯಾಪ್ತಿಯಲ್ಲಿ ಮಹಿಳಾ ಅಧ್ಯಯನವು ಒಂದು ಅಂತರಾಷ್ಟ್ರೀಯ ಮತ್ತು ಅಂತರ್‌ಶಾಸ್ತ್ರೀಯ ವಿಷಯವಾಗಿ ಗಂಭೀರ ಚಿಂತನೆಯಲ್ಲಿದೆ. ಮಹಿಳಾ ಅಧ್ಯಯನದ ಉಗಮ ಮತ್ತು ಬೆಳವಣಿಗೆಯ ಕುರಿತು ಎರಡು ಅಭಿಪ್ರಾಯಗಳಿವೆ. ಒಂದು ಅಭಿಪ್ರಾಯ ಮಹಿಳಾ ಚಳುವಳಿಯೇ ಮಹಿಳಾ ಅಧ್ಯಯನದ ಉಗಮಕ್ಕೆ ಸ್ಫೂರ್ತಿ ಎಂದಾದರೆ; ಮತ್ತೊಂದು ಬುದ್ಧಿ ಜೀವಿಗಳು, ಚಿಂತಕರು, ದಾರ್ಶನಿಕರ ಕೊಡುಗೆಯೇ ಮುಖ್ಯ ಕಾರಣ.

ಮಹಿಳಾ ಅಧ್ಯಯನದ ಹಿಂದಿರುವ ಚಾಲಕ ಶಕ್ತಿ ಸ್ತ್ರೀವಾದ. ಮಹಿಳೆಯರ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಅವರ ಬೇಡಿಕೆ ಆಸಕ್ತಿಗಳನ್ನು ಎತ್ತಿ ಹಿಡಿಯುವ ಮತ್ತು ಶೋಷಣೆಯ ವಿರುದ್ಧದ ಮಹಿಳಾಪರ ಹೋರಾಟವೇ ಸ್ತ್ರೀವಾದ. ಸ್ತ್ರೀವಾದ ಸ್ತ್ರೀ

ವಿಮೋಚನೆಯ ನಿಲುವನ್ನು ತಳೆದರೆ ವಿಮೋಚನೆಯ ಸ್ವರೂಪ ಹೇಗಿರಬೇಕು, ಅದನ್ನು ಹೇಗೆ ಸಾಧಿಸಬೇಕು ಎಂಬುದು ಮಹಿಳಾ ಅಧ್ಯಯನದ ಚೌಕಟ್ಟಿನಲ್ಲಿ ಬರುತ್ತದೆ. ಮಹಿಳೆಯರ ಸ್ಥಿತಿಯನ್ನು ವ್ಯಾಖ್ಯಾನಿಸಿ ಅವರ ಸಮಸ್ಯೆಗಳನ್ನು ಪರಿಕಲ್ಪಿಸಿರುವುದು ಮಹಿಳಾ ಅಧ್ಯಯನದ ಉದ್ದೇಶವಾಗಿದೆ.

ಸ್ತ್ರೀವಾದ ಹಿನ್ನೆಲೆಯನ್ನು ಹೊಂದಿರುವುದರಿಂದ ಮಹಿಳಾ ಅಧ್ಯಯನವನ್ನು ಸ್ತ್ರೀವಾದಿ ಅಧ್ಯಯನ ಎಂತಲೂ ಕರೆಯುತ್ತಾರೆ. ಮಹಿಳಾ ಅಧ್ಯಯನವು ಕೇವಲ ಮಹಿಳೆಯರನ್ನು ಕೇಂದ್ರಿಕರಿಸುವುದಿಲ್ಲ. ಇದುವರೆಗೆ ಪುರುಷ ಪಕ್ಷ ಪಾತವಾಗಿದ್ದ ಸಮಾಜವನ್ನು ಪರಿಶೀಲಿಸುವ ವಿಮರ್ಶಾತ್ಮಕ ಸಾಧನವೂ ಆಗಿದೆ. ಮಹಿಳೆಯರ ಪರಿಸ್ಥಿತಿಯನ್ನು ಸ್ತ್ರೀವಾದ ದೃಷ್ಟಿಕೋನದಿಂದ ಅರ್ಥಮಾಡಿಕೊಂಡು ಜಗತ್ತಿನೊಂದಿಗೆ ಮಹಿಳೆಯರ ಸಂಬಂಧ, ಅವರ ತುಳಿತ ಮತ್ತು ತಾರತಮ್ಯಯಕ್ಕೆ ಕಾರಣಗಳನ್ನು ಕಂಡುಹಿಡಿದು ಅವರ ಪರಿಸ್ಥಿತಿಯನ್ನು ಬದಲಾಯಿಸಲು ನಡೆಸುವ ಪ್ರಯತ್ನವೇ ಮಹಿಳಾ ಅಧ್ಯಯನ. ಈ ಮಹಿಳಾ ಅಧ್ಯಯನ ಕೇವಲ ಜ್ಞಾನ ಹೊಂದುವ ಪಠ್ಯಕ್ರಮವಾಗಬಾರದು. ಮಹಿಳಾ ವಿಮೋಚನೆಯ ಸಾಧನವಾಗಬೇಕಾಗಿದೆ ಎಂದು ಮೈತ್ರೇಯಿ ಕೃಷ್ಣರಾಜ್ ಅವರು ಹೇಳುತ್ತಾರೆ. ಬಹುಮುಖ್ಯವಾಗಿ ಮಹಿಳಾ ಅಧ್ಯಯನವು ಕೇವಲ ಅಧ್ಯಯನ, ಸಂಶೋಧನೆ, ಸಿದ್ಧಾಂತಗಳಿಗೆ ಸೀಮಿತಗೊಳ್ಳಬಾರದು. ಇವುಗಳಿಂದ ಹೊರ ಬಂದ ಅಂಶಗಳನ್ನು ಕಾರ್ಯರೂಪಕ್ಕೆ ತರಬೇಕಾಗುತ್ತದೆ. ಈ ನಿಟ್ಟಿನಲ್ಲಿ ಮಹಿಳಾ ಅಧ್ಯಯನವು ಮೂರು ಕ್ಷೇತ್ರಗಳಲ್ಲಿ ಕೆಲಸ ಮಾಡಬೇಕಾಗುತ್ತದೆ. ಅವುಗಳೆಂದರೆ ಬೋಧನೆ, ಸಂಶೋಧನೆ ಮತ್ತು ಕ್ರಿಯೆ. ಪುರಾಣೇತಿಹಾಸಗಳಿಂದ ಹಿಡಿದು ಆಧುನಿಕ ಜಗತ್ತಿನವರೆಗೆ ಮಹಿಳೆಯರ ನೈಜ ಸ್ಥಿತಿಗಳನ್ನು ಅಧ್ಯಯನ ನಡೆಸಿ ಸಮಾಜದಲ್ಲಿ ಅವರಿಗಾಗಿ ಹೊಸ ಬೆಳಕನ್ನು ನೀಡ ಬೇಕಾಗಿದೆ. ಮಹಿಳಾ ಅಧ್ಯಯನ ಸಮಾಜ ವಿಜ್ಞಾನದ ಪ್ರಮುಖ ಶಾಸ್ತ್ರವಾಗಿದೆ ಮತ್ತು ಸ್ತ್ರೀವಾದಿ ಶಿಕ್ಷಣವನ್ನು ಬೆಳೆಸುತ್ತದೆ.

ಮಹಿಳಾ ಅಧ್ಯಯನದ ಕೆಲವು ಧ್ಯೇಯಗಳನ್ನು ಜಾನ್ ಫ್ರೀಡನ್ ಅವರು ಹೀಗೆ ಹೆಸರಿಸಿದ್ದಾರೆ.

೧. ಮಹಿಳಾ ಅಧ್ಯಯನ ಜ್ಞಾನದ ಇತಿಹಾಸದಲ್ಲಿ ತುಂಬಿರುವ ಪುರುಷ ಪಕ್ಷಪಾತವನ್ನು ತೊಡೆದು ಹಾಕಿ ಹೊಸ ಶಾಖೆಯನ್ನು ಹುಟ್ಟು ಹಾಕಬೇಕು. ಮಹಿಳೆಯರ ಜೀವನ ಮತ್ತು

ಅನುಭವದ ಬಗ್ಗೆ ಸಂಶೋಧನೆ ನಡೆಯಬೇಕು.

೨. ಮಹಿಳೆಯರು ತಮ್ಮ ಬಗ್ಗೆ ಇತ್ಯಾತ್ಮಕ ಪ್ರತೀಕ ಬೆಳೆಸಿಕೊಳ್ಳುವಂತೆ ತಮ್ಮದೇ ಗುರಿ, ಸಾಧನೆ, ಆಯ್ಕೆಗಳನ್ನು ಇಟ್ಟುಕೊಳ್ಳುವಂತೆ ಆತ್ಮವಿಶ್ವಾಸ ಬೆಳೆಸಿಕೊಂಡು ಸಮಾಜಕ್ಕೆ ಕೊಡುಗೆ ಸಲ್ಲಿಸುವಂತೆ ಮಾಡುವುದು.

೩. ಮಹಿಳೆ ಮತ್ತು ಪುರುಷರ ನಡುವೆ ಈಗಿರುವ ಸಂಬಂಧವನ್ನು ಬದಲಾಯಿಸಿ ಸ್ನೇಹಪೂರ್ವ ಗೌರವಯುತ ಸಂಬಂಧವನ್ನು ಬೆಳಸಬೇಕು.

೪. ಸಮಾಜದಲ್ಲಿ ಐಕ್ಯತೆ, ಶಾಂತಿ ಹಾಗೂ ಮಾನವೀಯ ಮೌಲ್ಯಗಳನ್ನು ಸ್ಥಾಪಿಸುವ ಗುರಿಯನ್ನು ಮಹಿಳಾ ಅಧ್ಯಯನ ಸ್ಥಾಪಿಸಬೇಕು.

ವಿಶ್ವದಾದ್ಯಂತ ಶೋಷಣೆಗೆ ಒಳಗಾಗಿರುವ ಎಲ್ಲಾ ಮಹಿಳೆಯರ ಸಮಸ್ಯೆಗಳಿಗೂ 'ಮಹಿಳಾ ಅಧ್ಯಯನ' ಆಸಕ್ತಿ ತೋರುತ್ತದೆ. ದಬ್ಬಾಳಿಕೆ, ಶೋಷಣೆ, ಮಿಲಿಟರೀಕರಣ, ಪರಿಸರ ವಿನಾಶ, ಧಾರ್ಮಿಕ ಮೂಲಭೂತವಾದ, ಜಾಗತೀಕರಣ, ವೈದ್ಯಕೀಯ ಸಂಶೋಧನೆಗಳು, ಉಗ್ರಗಾಮಿತ್ವ- ಇಂತಹ ರಾಷ್ಟ್ರೀಯ, ಅಂತರಾಷ್ಟ್ರೀಯ ಸಮಸ್ಯೆಗಳು ಒಟ್ಟು ಮಹಿಳೆಯರ ಬದುಕಿನ ಮೇಲೆ ಸಾಕಷ್ಟು ಪರಿಣಾಮವನ್ನು ಬೀರುವುದರಿಂದ ಇವುಗಳಿಗೆ ಪರಿಹಾರ ಹುಡುಕುವಲ್ಲಿ, ಕಾನೂನು ರಚಿಸುವಲ್ಲಿ ಮಹಿಳಾ ದೃಷ್ಟಿಕೋನ ಬಹಳ ಅಗತ್ಯವಾದುದು ಎಂದು 'ಮಹಿಳಾ ಅಧ್ಯಯನ' ಒತ್ತು ನೀಡುತ್ತದೆ.

'ಮಹಿಳಾ ಅಧ್ಯಯನ' ಕೌಟುಂಬಿಕ ನೆಲೆಯಲ್ಲೇ ಆಗಲಿ, ಸಾಮಾಜಿಕ, ಸಾಂಸ್ಕೃತಿಕ ನೆಲೆಗಳಲ್ಲಿಯೇ ಆಗಲಿ, ಮಹಿಳೆಯ ದುಡಿಮೆ ಅಥವಾ ಕಾಯಕ ದಾಖಲಾಗಬೇಕು. ಬಿಡುವಿಲ್ಲದ ಒಂದಲ್ಲ ಒಂದು ರೀತಿಯಲ್ಲಿ ದೈಹಿಕವಾಗಿ ಮಾನಸಿಕವಾಗಿ ಕುಟುಂಬ ಹಾಗೂ ಸಮಾಜಕ್ಕೆ ಅವಿರತವಾಗಿ ದುಡಿಯುವ ಮಹಿಳೆಯರ ದುಡಿಮೆ ನಗಣ್ಯವಾಗಿರುವುದಕ್ಕೆ ಮಹಿಳಾ ಅಧ್ಯಯನವು ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸುತ್ತದೆ. ಅವಳ 'ದುಡಿಮೆ' 'ಕೊಡುಗೆ' ಎಂದು ಗುರುತಿಸುವ ಸಂದರ್ಭವನ್ನು ಸಮಾಜದಲ್ಲಿ ಸ್ಥಾಪಿಸುವ ಪ್ರಯತ್ನ ಮಾಡುತ್ತದೆ. ಕುಡುಕ, ಜೂಜಕೋರ, ಲಂಪಟ, ಸೋಮಾರಿ ಗಂಡನನ್ನು ಕಟ್ಟಿಕೊಂಡು, ಸಂಸಾರದ ನಿರ್ವಹಣೆಯಲ್ಲಿ ಹಲವು ಉಣ್ಣುವ ಬಾಯಿಗಳಿಗೆ ತುತ್ತೊದಗಿಸುವ ಹಳ್ಳಿಗಾಡಿನ ಹೆಣ್ಣು ಮಕ್ಕಳೇ ಇರಬಹುದು; ಪಟ್ಟಣ - ನಗರಗಳಲ್ಲಿ ವಿವಿಧ ರಂಗಗಳಲ್ಲಿ ಕೌಶಲ್ಯದ

ಕೆಲಸಗಾರಳಾಗಿರಬಹುದು, ಶಾಲಾ ಕಾಲೇಜುಗಳಲ್ಲಿ ಅಧ್ಯಾಪನ, ಕಛೇರಿಗಳಲ್ಲಿ ದುಡಿಯುವವರು, ಸಾರಿಗೆ, ವಕೀಲಿ ವೃತ್ತಿ, ವೈದ್ಯಕೀಯ, ಮನೆಗೆಲಸ, ವ್ಯಾಪಾರ- ಉದ್ದಿಮೆ, ಐಟಿ- ಬಿಟಿ, ಕೈಗಾರಿಕೆಗಳು, ಸಮಾಜ ಸೇವಾ ಕೆಲಸ ಹೀಗೆ ಹೊರಗೆ ದುಡಿಯುವ ಉದ್ಯೋಗಸ್ಥ ಮಹಿಳೆಯರ ದುಡಿಮೆ ಪರಿಗಣಿತವಾಗಿರುತ್ತದೆ. ಒಟ್ಟು ರಾಷ್ಟ್ರದ ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆಯ ದುಡಿಮೆಯನ್ನು ನಿರ್ಲಕ್ಷಿಸಲು ಸಾಧ್ಯವೇ ಇಲ್ಲ ಎಂಬ ವಾಸ್ತವತೆಯನ್ನು 'ಮಹಿಳಾ ಅಧ್ಯಯನ' ಮನದಟ್ಟು ಮಾಡಿಕೊಡುತ್ತದೆ.

ಮಹಿಳಾ ಅಧ್ಯಯನ ಇವತ್ತಿನ ಸಮಾಜದಲ್ಲಿ ಮಹಿಳೆಯ ಸ್ಥಾನಮಾನಗಳು, ಅವಳ ಸ್ಥಿತಿಗತಿಗಳು, ಹಕ್ಕು ಬಾದ್ಯತೆಗಳನ್ನು ಕುರಿತು ಚಿಂತಿಸುವ ಮುಖ್ಯ ವೇದಿಕೆಯಾಗಿದೆ. ಶತಶತಮಾನಗಳಿಂದ ಸಾಮಾಜಿಕ ಸಂದರ್ಭದಲ್ಲಿ ಶೋಷಣೆಗೊಳಗಾಗಿ ಪುರುಷನ ದಮನಕಾರೀ ಪ್ರವೃತ್ತಿಗೀಡಾಗಿ ತನಗೆ ಸಿಗಬೇಕಾದ ಅವಕಾಶಗಳನ್ನು ಕಳೆದುಕೊಂಡಿರುವ ಮಹಿಳೆಯ ಬದುಕಿನ ಅಭಿವೃದ್ಧಿಯಾಗಬೇಕಿದೆ.

ಈ ನಿಟ್ಟಿನಲ್ಲಿ ಮಹಿಳಾ ಅಧ್ಯಯನ ಆರಂಭ ಬೆಳವಣಿಗೆ, ವೇದ - ಪುರಾಣ - ಮಹಾಕಾವ್ಯಗಳಲ್ಲಿ ಮಹಿಳೆ, ಭಾರತೀಯ ಮಹಿಳಾ ಸಮಸ್ಯೆಗಳು, ಭಾರತೀಯ ಮಹಿಳಾ ಬದಲಾಗುತ್ತಿರುವ ಅಂತಸ್ತುಗಳು, ಮಹಿಳಾ ಸಬಲೀಕರಣ, ಈ ವಿಚಾರಗಳನ್ನು ನನ್ನ ಸೀಮಿತ ಅಧ್ಯಯನದೊಳಗೆ ತೊಡಗಿಸಿಕೊಂಡಿದ್ದೇನೆ.

ಮುಖ್ಯವಾಗಿ ಹೆಣ್ಣಿನ ಮೃದುಗುಣಗಳು, ಭಾವುಕ ಮನಸ್ಸನ್ನು ಪೋಷಿಸುವ ಅಂತಹುದೇ ವಾತಾವರಣವನ್ನು ಸೃಷ್ಟಿಸುತ್ತ, ಹೆಣ್ಣಿನ ಮೌಲ್ಯಗಳು, ಹೆಣ್ಣಿನ ಗುಣಗಳು ಎಂಬ ಪಾರಂಪರಿಕ, ಭ್ರಮಾತ್ಮಕ ಸತ್ಯವನ್ನು ಅಳಿಸಿ, ಅವಳ ವೈಚಾರಿಕ ಪ್ರಜ್ಞೆಯ ಕಡೆಗೆ, ಅವಳ ಬೌದ್ಧಿಕ ಸಂಶೋಧನೆಯ ಕಡೆಗೆ 'ಮಹಿಳಾ ಅಧ್ಯಯನ' ಗಮನ ಹರಿಸಬೇಕಾಗುತ್ತದೆ.



# ಅಧ್ಯಾಯ:೨

# ಮಹಿಳಾ ಅಧ್ಯಾಯನದ ಹುಟ್ಟು ಮತ್ತು ಬೆಳವಣಿಗೆ

# ಅಧ್ಯಾಯ: ೨

## ಮಹಿಳಾ ಅಧ್ಯಯನದ ಹುಟ್ಟು ಬೆಳವಣಿಗೆ

'ಮಹಿಳಾ ಅಧ್ಯಯನ' ಮಹಿಳಾ ಚಳುವಳಿ ಹೋರಾಟಗಳೊಂದಿಗೇ ಹುಟ್ಟು ಪಡೆದುಕೊಂಡಿದೆ. ೧೯೧೪ರಲ್ಲಿಯೇ ಅಮೇರಿಕಾ ದೇಶದಲ್ಲಿ ಮಹಿಳಾ ಅಧ್ಯಯನ ಪ್ರಾರಂಭ ಎನಿಸಿದರೂ ಅದಕ್ಕೆ ಒಂದು ತಾತ್ವಿಕ ನೆಲೆ ಕಂಡುಕೊಂಡಿದ್ದು ೧೯೭೦ರಿಂದ ಈಚೆಗೆ. ಈ ಕಾಲ ಘಟ್ಟದಿಂದ ಮಹಿಳೆಯರ ಕುರಿತು ಸಂಶೋಧನೆಯ ಗತಿ ವೇಗ ಪಡೆದುಕೊಂಡಿತು. ಸಂಶೋಧನೆಯ ಗುರಿ, ಕ್ಷೇತ್ರ, ದೃಷ್ಟಿಕೋನಗಳು ಬದಲಾಗಿ ಅದರ ವ್ಯಾಪ್ತಿ ವಿಶಾಲವಾಯಿತು. ಇದಕ್ಕೂ ಮುಂಚೆ ೧೯೦೬೦ ಮತ್ತು ೧೯೭೦ರ ದಶಕದಲ್ಲಿ ಎಸ್ತರ್‌ಬೋಸರಪ್ ಅವರು ಭಾರತವು ಸೇರಿದಂತೆ ಏಷ್ಯಾ ಮತ್ತು ಆಫ್ರಿಕಾದಲ್ಲಿ ಮಹಿಳೆಯರ ದುಡಿಮೆ ಮತ್ತು ಆರ್ಥಿಕತೆಗೆ ಅವರ ಕೊಡುಗೆ ಕುರಿತು ಅಧ್ಯಯನ ಮಾಡಿ ಗ್ರಂಥಗಳನ್ನು ರಚಿಸಿದ್ದು ಮಹಿಳಾ ಅಧ್ಯಯನದಲ್ಲಿ ಒಂದು ಮೈಲಿಗಲ್ಲು. ಮಹಿಳೆಯರ ತ್ರಿಗುಣ ಕೆಲಸದ ಹೊರೆ, ವರದಕ್ಷಿಣೆ, ಅತ್ಯಾಚಾರ, ವೇಶ್ಯಾವಾಟಿಕೆ ಮುಂತಾದ ಸಾಮಾಜಿಕ ಸಮಸ್ಯೆಗಳು; ಮಹಿಳೆ ಮತ್ತು ಕಾನೂನು; ಅಭಿವೃದ್ಧಿ ಮತ್ತು ಮಹಿಳೆ; ರಾಜಕೀಯದಲ್ಲಿ ಮಹಿಳೆ ಮುಂತಾದವುಗಳು ಸಂಶೋಧನಾ ವಿಷಯಗಳಾದವು.

೧೯೭೬ರಲ್ಲಿ ಇದೊಂದು ಪ್ರತ್ಯೇಕವಾದ ಅಧ್ಯಯನ ಕ್ಷೇತ್ರವಾಗಿ ರೂಪುಗೊಳ್ಳುವಲ್ಲಿ 'ಸ್ತ್ರೀವಾದಿ ಅಧ್ಯಯನ', 'ಮಹಿಳಾ ಅಧ್ಯಯನ', 'ಎಸ್.ಐ.ಜಿ.ಎನ್.ಎಸ್', ಕ್ವೆಸ್ಟ್, ಸೆಕ್ಸರೋಲ್ಸ್, ಅಂಡ್ ವುಮನ್ಸ್ ಸ್ಟಡೀಸ್, ನ್ಯೂಸ್ ಲೆಟರ್.... ಮಹಿಳಾ ಪತ್ರಿಕೆಗಳು ಪೂರಕವಾದವು. ಇದರ ಜೊತೆಗೆ ವಿವಿಧ ಮಹಿಳಾ ಲೇಖನಗಳ ಸಂಗ್ರಹಗಳು ಮಹಿಳಾ ಅಧ್ಯಯನದಲ್ಲಿ ನಿರತವಾದ ಸ್ತ್ರೀವಾದಿ ಚಿಂತಕರು ಮಹಿಳಾ ಅನುಭವಗಳನ್ನು ಹಂಚಿಕೊಳ್ಳಲೆಂದೇ ೧೯೭೭ರಲ್ಲಿ 'ನ್ಯಾಷನಲ್ ವುಮೆನ್ಸ್ ಅಸೋಸಿಯೇಷನ್'ನ್ನು ಸ್ಥಾಪಿಸಿದರು.

' ದಿ ಸೆಂಕೆಂಡ್ ಸೆಕ್ಸ್' ಕೃತಿಯ ಲೇಖಕಿ ಸಿಮನ್ ದಿ ಬೋವಾ, ಆಧುನಿಕ ಸ್ತ್ರೀವಾದಿ ಚಳುವಳಿಯ ಮೇಲೆ ಪ್ರಭಾವ ಬೀರಿದ ಮೊದಲ ಸ್ತ್ರೀವಾದಿ ವಿಮರ್ಶಕಿಯಾಗಿದ್ದಾಳೆ. ಈ ಕೃತಿಯನ್ನು ೧೯೪೯ರಲ್ಲಿ ರಚಿಸಿದಳು. ನಂತರ ಕಾಲದಲ್ಲಿ ಸ್ತ್ರೀವಾದಿ ಮನೋಭಾವವನ್ನು

ಪೋಷಿಸುವ ಅನೇಕ ಕೃತಿಗಳು ಸಾಲುಸಾಲಾಗಿ ಬಂದವು. ತೃತೀಯ ರಾಷ್ಟ್ರಗಳ ಅರ್ಥವ್ಯವಸ್ಥೆ, ಸಮಾಜಶಾಸ್ತ್ರ, ವೈದ್ಯಕೀಯ, ಸಾಹಿತ್ಯ ಹೀಗೆ ಅನೇಕ ವಿಷಯಗಳಲ್ಲಿ ಸ್ತ್ರೀಪರ ಚಿಂತನೆಗಳು ಕಾಣಿಸಿಕೊಂಡವು. ಈ ಅಧ್ಯಯನ ಕ್ರಮಗಳು ಮಹಿಳೆಯರ ಸ್ಥಾನಮಾನಗಳನ್ನು ಕುರಿತಂತೆ ಅನೇಕ ಪ್ರಶ್ನೆಗಳನ್ನೆತ್ತಿದವು.

ಮಹಿಳಾ ಆಯೋಗ ಅರವತ್ತಾರು ಮುಖ್ಯ ರೂಪುರೇಖೆಗಳು ಹಾಗೂ ಮಹಿಳೆಯರ ಸ್ಥಾನಮಾನಗಳ ಗ್ರಂಥ ಸೂಚಿಯನ್ನು ಸಂಗ್ರಹಿಸಿತು. ''ಅದನ್ನು 'ಫೀಮೇಲ್ ಸ್ಟಡೀಸ್ - ೨' ಎಂದು ಪ್ರಕಟಿಸಲಾಯಿತು. ಈ ಆಯೋಗದ ಅಧ್ಯಕ್ಷೆ ಫ್ಲಾರೆನ್ಸ್ ಹೋ ಅಗಾಧವಾಗಿ ಬೆಳೆಯುತ್ತಿರುವ ಈ ಕ್ಷೇತ್ರವನ್ನು 'ಸ್ತ್ರೀವಾದಿ ಅಧ್ಯಯನ' ಎಂದು ಕರೆದಳು''[೧].

## ಅ) ಭಾರತದಲ್ಲಿ 'ಮಹಿಳಾ ಅಧ್ಯಯನ'

ಏಷ್ಯಾದ ಇತರ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ಮಹಿಳಾ ಅಧ್ಯಯನವು ಅಗಾಧವಾಗಿ ಬೆಳೆದಿದೆ. ''ಮಹಿಳಾ ಅಧ್ಯಯನ ಪದವನ್ನು ಪಾಶ್ಚಿಮಾತ್ಯರಿಂದ ಪಡೆದಿದ್ದೇವೆ. ಅರವತ್ತರ ದಶಕದ ಕಡೆ (ವರ್ಷಗಳಲ್ಲಿ) ಅಮೇರಿಕಾದಲ್ಲಿ ಇದನ್ನು ಮೊದಲ ಬಾರಿಗೆ ಉಪಯೋಗಿಸಲಾಯಿತು''[೨] ಪಾಶ್ಚಿಮಾತ್ಯ ಚಳುವಳಿಯ ಪ್ರಭಾವದಿಂದ ಭಾರತದಲ್ಲಿ ಹುಟ್ಟಿಕೊಂಡ ಮಹಿಳಾ ಚಳುವಳಿಯೊಂದಿಗೆ ಮಹಿಳಾ ಅಧ್ಯಯನವು ಬೆಳೆಯಿತು. ಇದೇ ಸಮಯದಲ್ಲಿ ಮಹಿಳಾ ಚಿಂತನೆ, ಅಧ್ಯಯನ, ಸಂಶೋಧನೆ, ಲೇಖನ ಮತ್ತು ಗ್ರಂಥಗಳ ರಚನೆಯಲ್ಲಿ ತೊಡಗಿದ್ದ ಮಹಿಳಾ ತಜ್ಞರು ನೀಡಿದ ಕೊಡುಗೆಯು ಮಹಿಳಾ ಅಧ್ಯಯನ ಅತಿ ವೇಗವಾಗಿ ಬೆಳೆಯಲು ಕಾರಣವಾಯಿತು.

ಹತ್ತೊಂಬತ್ತನೇ ಶತಮಾನದಲ್ಲಿ ಇತಿಹಾಸ ತಜ್ಞರು ಮಹಿಳೆಯರ ಸ್ಥಾನ ಮತ್ತು ಸಾಮಾಜಿಕ ಪಿಡುಗುಗಳ ಕುರಿತು ಅಧ್ಯಯನ ನಡೆಸಿ ಗ್ರಂಥಗಳನ್ನು ಬರೆದರು. ಆದರೆ ಅದು ಸೀಮಿತ ಕ್ಷೇತ್ರದಲ್ಲಿ ನಡೆದಿತ್ತು. ಸ್ವಾತಂತ್ರ್ಯಕ್ಕೆ ಮೊದಲು ಮಾನವಶಾಸ್ತ್ರಜ್ಞರು ಹಾಗೂ ಇತಿಹಾಸ ತಜ್ಞರು ಹೆಚ್ಚಾಗಿ ವೇದ ಹಾಗೂ ಸ್ಮೃತಿಗಳ ಕಾಲದಲ್ಲಿ ಮಹಿಳೆಯರ ಸ್ಥಾನ ಹೇಗಿತ್ತು ಎಂಬ ಅಧ್ಯಯನ ನಡೆಸಿದಾಗ ಅವರ ಸ್ಥಾನ ಉತ್ತಮವಾಗಿತ್ತು. ತರುವಾಯ ಅದು ಹಾಳಾಗುತ್ತ ಬಂದಿತು ಎಂದು ಹೇಳಿದರು. ಕೆಲವು ವಿದ್ವಾಂಸರು, ಸಮಾಜ ಸುಧಾರಕರು, ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮಹಿಳೆಯರ ಸ್ಥಾನಕ್ಕೆ ದಕ್ಕೆ ತರುವಂತಹ ಅನೇಕ ಮಾನವೀಯ ಸಾಮಾಜಿಕ ಪದ್ಧತಿಗಳನ್ನು ಪರಿಶೀಲಿಸಲು ಪ್ರಾರಂಭಿಸಿದರು. ಆದರೆ ಅವರು

ಮೇಲುಜಾತಿ ಹಿಂದೂ ಮಹಿಳೆಯರ ಕುರಿತು ಅಧ್ಯಯನ ನಡೆಸಿದರು. ಸತಿ ಪದ್ಧತಿ, ಬಾಲ್ಯ ವಿವಾಹ, ವಿಧವಾ ಪದ್ಧತಿ, ಅನಕ್ಷರತೆ ಇತ್ಯಾದಿ ಸಮಸ್ಯೆಗಳನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಇದರ ಪರಿಣಾಮವಾಗಿ ಮಹಿಳೆಯರ ಪರ ಕೆಲವು ಸುಧಾರಣೆಗಳು ಜಾರಿಗೆ ಬಂದವು.

ಜ್ಯೋತಿರಾವ್ ಪುಲೆ (೧೮೨೭ - ೧೮೯೦) ಅವರು ಸ್ತ್ರೀ ವಿಮೋಚನೆಯ ಬಹುದೊಡ್ಡ ಹೋರಾಟಗಾರರು. ಸ್ತ್ರೀಯರಲ್ಲಿ ಸ್ವಾಭಿಮಾನ ಸ್ವಾವಲಂಬನೆಯ ಜಾಗೃತಿ ಮೂಡಿಸಿ ಸತ್ಯ ಶೋಧಕ ಸಮಾಜಾಂದೋಲನಕಾರರಾಗಿ, ಸ್ತ್ರೀ ಸಮಾಜಕ್ಕೆ ಶಿಕ್ಷಣದ ಮೂಲಕ ಜ್ಞಾನ ಜ್ಯೋತಿಯ ಬೆಳಕನ್ನು ನೀಡಿದರು. ಡಾ|| ಬಾಬಾಸಾಹೇಬ್ ಅಂಬೇಡ್ಕರ್‌ರಿಗೆ ವೈಚಾರಿಕ ಗುರುವಾಗಿದ್ದ ಜ್ಯೋತಿರಾವ್ ಪುಲೆ ತಾವು ಸ್ಥಾಪಿಸಿದ 'ಸತ್ಯ ಶೋಧಕ ಸಮಾಜದ' ಮೂಲಕ ಮಹಿಳಾಂದೋಲನ ಮತ್ತು ದಲಿತಾಂದೋಲನ ರೂವಾರಿಗಳಾಗಿದ್ದರು.

''ವಿಧವೆಯರ ಕಣ್ಣೀರನ್ನು ಒರೆಸದ, ತಬ್ಬಲಿಯಗೋಳನ್ನು ಹಿಂಗಿಸದ ಧರ್ಮದಲ್ಲಿ ನನಗೆ ನಂಬಿಕೆಯಿಲ್ಲ'' ಈ ಮಾತು ಶ್ರೀ ರಾಮಕೃಷ್ಣ ಪರಮಹಂಸರದು. ಅವರ ಈ ಮಾತುಗಳಲ್ಲಿ ಎರಡು ಮುಖ್ಯ ಸಂಗತಿಗಳಿವೆ. ಅವುಗಳೆಂದರೆ ಹೆಣ್ಣು ಮತ್ತು ಧರ್ಮ. ಯಾವುದೇ ಧರ್ಮದ ಮೂಲ ಆಶಯ ಮನುಷ್ಯ ಕಲ್ಯಾಣ.

ಇನ್ನು ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಅವರನ್ನು ಭಾರತದ ಸ್ತ್ರೀ ಸಮಾನತೆಯ ಶಾಸನಕಾರ ಎಂದೇ ಹೇಳಬಹುದು. ಅಂಬೇಡ್ಕರ್ ಅವರು ಭಾರತದಂಥ ಜಾತಿ ಆಧಾರಿತ ಸಮಾಜದಲ್ಲಿ ಸ್ತ್ರೀ ವಿಮೋಚನೆಗೆ ಮಹಿಳಾ ಹಕ್ಕನ್ನು ಸ್ಥಾಪಿಸಲು ಲಿಂಗಭೇದ ರಹಿತ ಸಮಾಜದ ನಿರ್ಮಾಣದ ಕನಸನ್ನು ಕಂಡವರು. ಸ್ವತಂತ್ರ ಭಾರತದಲ್ಲಿ ಸ್ತ್ರೀಯರ ಸಂರಕ್ಷಣೆ ಮತ್ತು ಸಮಾನತೆಗಾಗಿ ಸಂವಿಧಾನಾತ್ಮಕ ನಿಯಮಗಳನ್ನು ರಚಿಸಿದರು.

ಸ್ವಾತಂತ್ರ್ಯ ನಂತರ ಮತ್ತು ಅರವತ್ತರ ದಶಕದವರೆಗೆ ಮಹಿಳೆಯರಿಗೆ ಸಂಬಂಧಿಸಿದ ಅಧ್ಯಯನ ಸಂಶೋಧನೆಗಳು ಮಹಿಳೆಯರ ಪಾತ್ರ, ವಿವಾಹ, ಪ್ರಾಚೀನ ಕಾಲದಲ್ಲಿ ಮಹಿಳೆಯರ ಸ್ಥಾನ, ಸಾಮಾಜಿಕ ಸಂಸ್ಥೆಗಳಲ್ಲಿಯ ಮಹಿಳೆಯರ ಪಾತ್ರಕ್ಕೆ ಸೀಮಿತವಾಗಿದ್ದವು. ಜೊತೆಯಲ್ಲೆ ನಗರದ ಮಧ್ಯಮ ವರ್ಗದ ಉದ್ಯೋಗಸ್ಥ ಮಹಿಳೆಯರ ಕುರಿತು ಸಂಶೋಧನೆಗಳ ನಡೆದವು. ಗ್ರಾಮೀಣ ಪ್ರದೇಶದ ಕೆಳವರ್ಗದ ಮಹಿಳೆಯರ ಕುರಿತು ಅಧ್ಯಯನಗಳು ನಡೆಯಲಿಲ್ಲ. ಹೀಗೆ ಅಧ್ಯಯನಗಳು ಒಂದು ವರ್ಗಕ್ಕೆ ಸೀಮಿತವಾಗಿತ್ತಷ್ಟೆ.

ಅಲ್ಲಿ ವಿಷಯಗಳನ್ನು ಪರೀಶೀಲಿಸುವಾಗ ಅದರಲ್ಲಿ ಒಟ್ಟು ಮಹಿಳಾಪರ ದೃಷ್ಟಿಕೋನ ಇರಲಿಲ್ಲ.

ಆದರೂ ''೧೯೭೦ರಲ್ಲಿ ಮಹಿಳಾ ವಿಷಯ ಕುರಿತು ಆಸಕ್ತಿ ಹುಟ್ಟಿಸಿದ ಒಂದು ಪ್ರಮುಖ ಘಟನೆಯೆಂದರೆ 'ಕಮಿಟ ಆನ್ ದಿ ಸ್ಟೇಟಸ್ ಆಫ್ ವುಮೆನ್' ಸಮಿತಿಯು ಒಂದು ವರದಿಯನ್ನು ಪ್ರಕಟಿಸಿದ್ದು'' [೩]. ಸ್ವಾಂತಂತ್ರ್ಯ ಬಂದ ಮೂರು ದಶಕಗಳಾದರೂ, ಪಂಚವಾರ್ಷಿಕ ಯೋಜನೆಗಳನ್ನು ಅನುಸರಿಸುತ್ತಿದ್ದರೂ ಮಹಿಳೆಯರ ಸ್ಥಾನ ಕೆಳಮಟ್ಟದಲ್ಲಿ ಇದ್ದುದ್ದನ್ನು ತೋರಿಸಿತು.

ಮಹಿಳೆಯರಲ್ಲಿ ಅತ್ಯಂತ ಕಡಿಮೆ ಕೂಲಿಗೆ ಕೆಲಸ ಮಾಡುತ್ತಿದ್ದ ಅದೆಷ್ಟೋ ಮಹಿಳೆಯರು ಕುಟುಂಬದ ನಿರ್ವಹಣೆ ಹೊತ್ತು ಕೊಂಡಿದ್ದರು. ನಗರದ ಮಧ್ಯಮ ವರ್ಗದ ಮಹಿಳೆಯರು ಸ್ವಲ್ಪ ಮಟ್ಟಿನ ಶಿಕ್ಷಣ ಮತ್ತು ಉದ್ಯೋಗಾವಕಾಶ ಪಡೆದಿದ್ದುದು ಬಿಟ್ಟರೆ ಗ್ರಾಮೀಣ ಮಹಿಳೆಯರ ಸ್ಥಿತಿ ಉತ್ತಮ ಗೊಂಡಿರಲಿಲ್ಲ. ಗಂಡು - ಹೆಣ್ಣಿನ ಅನುಪಾತದಲ್ಲಿ ಹೆಣ್ಣಿನ ಅನುಪಾತ ಗಂಡಿನದಕ್ಕಿಂತ ಬಹಳ ಕಡಿಮೆಯಾಗಿತ್ತು. ಚುನಾವಣೆಯ ಸಂದರ್ಭದಲ್ಲಿ ಮತದಾನವನ್ನು ಮಾಡುವುದರ ಹೊರತಾಗಿ ಮಹಿಳೆಯರು ಯಾವುದೇ ರೀತಿಯ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ಗಾಂಧೀಜಿ ಜೊತೆಗಿದ್ದ ಮಹಿಳೆಯರದೇ ಬೇರೆ ಮಾತು.

ನೂಲುವುದು ಮತ್ತು ನೇಯುವುದರ ಮೂಲಕ ಆರ್ಥಿಕ ಸ್ವಾವಲಂಬನೆ, ರಾಷ್ಟ್ರೀಯ ಮನೋಭಾವನೆ ಸಾಧ್ಯವಾಗುತ್ತದೆ ಎಂದವರು ಗಾಂಧೀಜಿ. ಆದ್ದರಿಂದ ಮಧ್ಯಮ ವರ್ಗದ ಮಹಿಳೆಯರಿಗೆ ಚರಕವು ಕುಟುಂಬದ ಆದಾಯಕ್ಕೆ ಪೂರಕವಾದರೆ ಬಡ ಮಹಿಳೆಯರಿಗೆ ಅದು ಜೀವನೋಪಾಯ. ನೂಲುವ ಚಕ್ರವು ವಿಧವೆಯ ಪ್ರೀತಿ ಪೂರ್ವ ಸಂಗಾತಿ. ಸುಶಿಕ್ಷಿತ ಶ್ರೀಮಂತ ಮಹಿಳೆಯರಿಗೆ ನೂಲು ತೆಗೆಯುವುದು ಒಂದು ಧಾರ್ಮಿಕ ಕರ್ತವ್ಯ ಎಂದು ಗಾಂಧೀಜಿಯವರು ಕರೆ ಕೊಟ್ಟರು. ಗಾಂಧೀಜಿ ನೂಲುವ ಮತ್ತು ನೇಯುವ ಕಾಯಕದ ಮೂಲಕ ಹಾಗೂ ಖಾದಿ ಬಟ್ಟೆಯ ಮೂಲಕ ಸಮಾಜದ ಎಲ್ಲಾ ಸ್ತರದ ಜನರನ್ನು ಮುಖ್ಯವಾಗಿ ಮಹಿಳೆಯರನ್ನು ಒಂದು ಉದ್ದೇಶಕ್ಕೆ ಒಗ್ಗೂಡಿಸುವ ಪ್ರಯತ್ನ ಮಾಡಿದರು. ಭಾರತದ ಅಹಿಂಸಾತ್ಮಕ ಸ್ವಾತಂತ್ರ್ಯ ಆಂದೋಲನಕ್ಕೆ ಮಹಿಳೆಯರನ್ನು ಸಂಘಟಿಸಲು ಇದು ಸಹಕಾರಿಯಾಯಿತು. ಅಧ್ಯಯನ ಮತ್ತು ಸಂಶೋಧನೆ ನಂತರ ಕ್ರಿಯಾತ್ಮಕವಾಗಿ

ಪರಿಣಾಮಕಾರಿಯಾಗಿ ಹೇಗೆ ತೊಡಗಿಸಿಕೊಳ್ಳಬಹುದು ಎಂಬುದಕ್ಕೆ ಗಾಂಧೀಜಿ ಒಂದು ಜೀವಂತ ಸಾಕ್ಷಿ. 'ಹೊಸ ಸಮಾಜ ಶೋಷಣೆ ರಹಿತವಾದ ಅಹಿಂಸಾತ್ಮಕ ಸಮಾಜವಾಗಿರಬೇಕು', ಅಹಿಂಸಾತ್ಮಕ ಸಮಾಜದ ವ್ಯವಸ್ಥೆಯಲ್ಲಿ ಮಹಿಳೆಯರೇ ಭವಿಷ್ಯದ ನಿರ್ಮಾಪಕರಾಗಬೇಕು ಎಂಬುದು ಗಾಂಧೀಜಿಯವರ ಆಶಯವಾಗಿತ್ತು.

ಸ್ವಾತಂತ್ರ್ಯದ ನಂತರ ಅಧಿಕಾರಕ್ಕೆ ಬಂದ ನಮ್ಮದೇ ಸರಕಾರವು ತನ್ನ ಎಲ್ಲಾ ಅಭಿವೃದ್ಧಿ ಕಾರ್ಯಗಳ ಫಲವು ಸಹಜವಾಗಿ ಮಹಿಳೆಯರನ್ನು ತಲುಪುತ್ತದೆ ಎಂದು ಭಾವಿಸಿದ್ದರೂ, ಮಹಿಳೆಯರ ವಿಷಯಕ್ಕೆ ವಿಶೇಷ ಗಮನ ನೀಡದಾಯಿತು. ಮೊದಲ ಐದು ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರಿಗೆ ವಿಷೇಷ ಗಮನ ನೀಡದಿರುವುದು ಸ್ಪಷ್ಟವಾಗಿತ್ತು. ಆರನೇ ಪಂಚವಾರ್ಷಿಕ ಯೋಜನೆಯಲ್ಲೂ ಮಹಿಳೆಯರಿಗೆ ಸಂಬಂಧಿಸಿದಂತೆ ಕೇವಲ ಆರು ಅಂಶಗಳನ್ನು ಸೇರಿಸಿದ್ದುದು ಕಂಡು ಬಂದಿತ್ತು. ಇದಾದ ನಂತರ ಮಹಿಳೆಯರು ಕೇವಲ ರಕ್ಷಣೆ ಪಡೆಯಲು ಮತ್ತು ಶಿಕ್ಷಣ ಕಾರ್ಯಕ್ರಮಗಳ ಫಲಾನುಭವಿಗಳು ಮಾತ್ರವಲ್ಲ ಹೊಸ ಸಮಾಜವನ್ನು ಕಟ್ಟುವ ರೂವಾರಿಗಳು ಎಂದು ಗುರುತಿಸುವ ಕಾರ್ಯ ಪ್ರಾರಂಭವಾಯಿತು. ಸರ್ಕಾರದ ವಲಯದಲ್ಲಾಗಲಿ ಅಥವಾ ಸಮಾಜದ ವ್ಯವಸ್ಥೆಯಲ್ಲಾಗಲಿ ಬದಲಾವಣೆ ತರಲು, ಮಹಿಳೆಯರ ಪರವಾಗಿ ಕೆಲಸ ಮಾಡಲು ಮಹಿಳಾ ಅಧ್ಯಯನ ತಜ್ಞರು ಹಾಗೂ ಮಹಿಳಾ ಸಂಘಟನೆಗಳ ಪಾತ್ರ ತುಂಬಾ ಮುಖ್ಯವಾಯಿತು.

ನಮ್ಮ ಶೈಕ್ಷಣಿಕ ವ್ಯವಸ್ಥೆಯ ಮುಖ್ಯ ಗುರಿ ಸಮಾನತೆ ಹಾಗೂ ಸಾಮಾಜಿಕ ನ್ಯಾಯ ದೊರಕಿಸಿಕೊಡುವುದು. ಆದರೆ ಅನೇಕ ಸಲ ಶಿಕ್ಷಣವು ಹಾಗೂ ಶಿಕ್ಷಕರ ಪಕ್ಷಪಾತ ಮನೋಭಾವದ ಮೂಲಕ ಲಿಂಗ ತಾರತಮ್ಯವನ್ನು ಪುನರ್ ಸ್ಥಾಪಿಸುವುದು ಕಂಡು ಬರುತ್ತದೆ. ಹಲವು ವರ್ಷಗಳು ಯಾವುದೇ ಶೈಕ್ಷಣಿಕ ವಿಷಯದಲ್ಲಿ ಮಹಿಳಾ ವಿಚಾರಗಳು ಮುಖ್ಯ ಭಾಗವಾಗಿರಲಿಲ್ಲ. ಇತ್ತೀಚೆಗಷ್ಟೆ ಶಿಕ್ಷಣ ಪದ್ಧತಿಯಲ್ಲಿ ಮಹಿಳಾ ವಿಷಯಗಳನ್ನು ಸೇರಿಸಲಾಗಿದೆ. ಮಹಿಳಾ ಅಧ್ಯಯನವೇ ಒಂದು ಅಂತರ್‌ಶಿಸ್ತಿನ ವಿಷಯವಾಗಿದೆ.

೧೯೧೬ರಲ್ಲಿ ಮುಂಬೈಯಲ್ಲಿ ಸ್ಥಾಪನೆಗೊಂಡ SNDT (Shreemathi Nathibai Damodar Thackersag) ಮಹಿಳಾ ವಿಶ್ವವಿದ್ಯಾಲಯ ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವುದರ ಜೊತೆಗೆ ಮಹಿಳಾ ಅಧ್ಯಯನವನ್ನು ಶೀಘ್ರವಾಗಿ ಬೆಳೆಸುವುದರಲ್ಲೂ ಪ್ರಮುಖ ಪಾತ್ರವಹಿಸಿದೆ. ಇದು ೧೯೭೪ರಲ್ಲಿ ಮಹಿಳಾ ಅಧ್ಯಯನ

ಸಂಶೋಧನ ಕೇಂದ್ರವನ್ನು ಸ್ಥಾಪಿಸಿತು.

ದೆಹಲಿಯಲ್ಲಿ ಸ್ಥಾಪನೆಗೊಂಡ ಮಹಿಳಾ ಅಧ್ಯಯನ ಅಭಿವೃದ್ಧಿ ಕೇಂದ್ರ (Center for Women Development) ಡಾ|| ವೀಣಾ ಮಜುಮ್‌ದಾರ್ ಅವರ ನಾಯಕತ್ವದಡಿಯಲ್ಲಿ ಮಹಿಳಾ ಅಧ್ಯಯನ ಅಭಿವೃದ್ಧಿಗೆ ಕೊಡುಗೆಯನ್ನು ನೀಡಿದೆ. ಎಸ್.ಎನ್.ಡಿ.ಟಿ. ಮಹಿಳಾ ಅಧ್ಯಯನ ಸಂಶೋಧನಾ ಕೇಂದ್ರವು (Research center for women's studies) ಮಹಿಳಾ ಅಧ್ಯಯನದ ಬೆಳವಣಿಗೆಯ ಕೇಂದ್ರ ಬಿಂದುವಾಯಿತು. ಅದರ ನಿರ್ದೇಶಕರಾದ ಡಾ|| ನೀರಾದೇಸಾಯಿ ಮತ್ತು ಡಾ|| ಮೈತ್ರೇಯ, ಕೃಷ್ಣರಾಜರವರ ನೇತೃತ್ವದಲ್ಲಿ ಮಹಿಳಾ ಅಧ್ಯಯನ ಪ್ರಗತಿಯನ್ನು ಕಂಡಿತು.

೧೯೮೧ರಲ್ಲಿ ಮುಂಬೈಯಲ್ಲಿ ನಡೆದ ಪ್ರಥಮ ರಾಷ್ಟ್ರೀಯ ಮಹಿಳಾ ಅಧ್ಯಯನ ಸಮ್ಮೇಳನದಲ್ಲಿ ಪಠ್ಯ ಪುಸ್ತಕಗಳ ಬಗ್ಗೆ ಚರ್ಚಿಸಲಾಯಿತು. ೧೯೮೪ರಲ್ಲಿ ಎಸ್.ಎನ್.ಡಿ.ಟಿ ಯು ಮಹಿಳಾ ಅಧ್ಯಯನವನ್ನು ದೇಶಾದ್ಯಂತ ಬೆಳೆಸಬೇಕೆಂದು, ಎಲ್ಲಿ ಪ್ರಾರಂಭಿಸಬಹುದು ಎಂದು ಯೋಚಿಸಿ ವಿಶ್ವವಿದ್ಯಾಲಯಗಳ ಪಟ್ಟಿಯನ್ನು ತಯಾರಿಸಿತು. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ೧೯೮೬ರಲ್ಲಿ ಯುಜಿಸಿಯು ಮಹಿಳಾ ಅಧ್ಯಯನಕ್ಕೆ ರೂಪಿಸಿದ ಮಾರ್ಗಸೂತ್ರಗಳಿಂದ ಮಹಿಳಾ ಅಧ್ಯಯನವು ಔಪಚಾರಿಕ ಶಿಕ್ಷಣದಲ್ಲಿ ಅಧಿಕೃತವಾಗಿ ಸೇರಲು ಸಾಧ್ಯವಾಯಿತು.

ಈ ಎಲ್ಲಾ ಪ್ರಯತ್ನಗಳ ಫಲವಾಗಿ ೧೯೮೦ರ ದಶಕದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಮಹಿಳಾ ಅಧ್ಯಯನ ಮತ್ತು ಮಹಿಳಾ ವಿಷಯಗಳು ಹೆಚ್ಚಿನ ಪ್ರಾಮುಖ್ಯತೆ ಪಡೆದವು. ಮಹಿಳೆಯರ ಸಾಮಾಜಿಕ ವಿಷಯಗಳಿಗೆ ಸೀಮಿತಗೊಂಡಿದ್ದ ಸಂಶೋಧನೆ ತನ್ನ ಮಿತಿಯನ್ನು ಮೀರಿ ಇತರ ವಿಷಯಗಳಿಗೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿತು. ಮಹಿಳಾ ಕಾರ್ಮಿಕರು, ಮಹಿಳೆಯರ ಮೇಲೆ ತಂತ್ರಜ್ಞಾನದ ಪ್ರಭಾವ, ಸ್ತ್ರೀಯರ ಬಡತನ, ಗ್ರಾಮ ಮಟ್ಟದಲ್ಲಿ ಮಹಿಳೆಯರ ಸಂಘಟನೆ, ಅಭಿವೃದ್ಧಿ ಮತ್ತು ಮಹಿಳೆ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ಹಾಗೂ ಮಹಿಳಾ ಚಳುವಳಿಗಳ ಬಗ್ಗೆ ಸಂಶೋಧನೆ ನಡೆದವು. ಹಿಂದಿನ ಕಾಲದ ಮಹಿಳೆಯರ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಮತ್ತು ವಿಶ್ಲೇಷಿಸುವುದಕ್ಕೆ ಹೊಸ ಆಯಾಮವನ್ನು ಕೊಡಲಾಯಿತು. ಸಾಂಪ್ರದಾಯಿಕ ಸಂಶೋಧನ ವಿಧಾನಕ್ಕೆ ಬದಲಾಗಿ ಸ್ತ್ರೀವಾದಿ ಸಂಶೋಧನೆಯನ್ನು ಅಭಿವೃದ್ಧಿ ಪಡಿಸಲಾಯಿತು.

'ಮಹಿಳಾ ಅಧ್ಯಯನ'ವು ಕೇವಲ ಅಧ್ಯಯನ ವಿಷಯವಾಗಬಾರದು. ಪ್ರಾಯೋಗಿಕ, ಕ್ರಿಯಾತ್ಮಕ ಹಾಗೂ ಕಾರ್ಯರೂಪದಲ್ಲಿ ಕಂಡುಬರಬೇಕು. ಬೋಧನೆ, ಸಂಶೋಧನೆ ಮತ್ತು ಕ್ರಿಯೆ ಇವು ಮೂರು ಮಿಳಿತಗೊಂಡು ಮಹಿಳಾ ಅಧ್ಯಯನವು ವಿಶೇಷವಾಗಿ ಬೆಳೆಯಲಾರಂಭಿಸಿತು. ಕ್ರಿಯೆಗೆ ಹೆಚ್ಚು ಒತ್ತು ಕೊಟ್ಟು 'ಕ್ರಿಯಾತ್ಮಕ ಸಂಶೋಧನೆ' ಯನ್ನು ಪ್ರಾರಂಭಿಸಿತು. ಮಹಿಳಾ ಅಧ್ಯಯನದಲ್ಲಿ ಪುಸ್ತಕ, ಪ್ರಬಂಧ, ಲೇಖನಗಳನ್ನು ಪ್ರಕಟಿಸುವ ಸಲುವಾಗಿ ವಿಚಾರ ಸಂಕೀರ್ಣ, ಸಮ್ಮೇಳನ ಮತ್ತು ಕಾರ್ಯಗಾರಗಳು ನಡೆದವು. ವಿಶ್ವವಿದ್ಯಾಲಯ ಧನಸಹಾಯ ಆಯೋಗವು (university grant commission) ಮುಂದಿನ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳಿಗೆ ಧನ ಸಹಾಯವನ್ನು ಮುಂದುವರಿಸಿತು.

ಒಟ್ಟಾರೆ ಮಹಿಳಾ ಅಧ್ಯಯನವು ಸಾಮಾನ್ಯ ಮತ್ತು ನಿರ್ದಿಷ್ಟ ಉದ್ದೇಶಗಳನ್ನು ಹೊಂದಿದೆ. ಅವುಗಳೆಂದರೆ:-

೧. ಸಮಾಜದಲ್ಲಿ ಲಿಂಗ ಸಮಾನತೆ ತರುವುದು. ಅಸಮಾತನೆ ತರುವ ತಂತ್ರ ಮತ್ತು ದಾರಿಗಳನ್ನು ಕಂಡು ಹಿಡಿಯುವುದು.

೨. ಸಾಮಾಜಿಕ ವಾಸ್ತವಿಕತೆಯನ್ನು ಮಹಿಳಾ ದೃಷ್ಟಿಕೋನದಿಂದ ಅರ್ಥ ಮಾಡಿಕೊಳ್ಳುವುದು.

೩. ಮಹಿಳೆಯರಲ್ಲಿ ಸಂಪೂರ್ಣ ಸಾಮರ್ಥ್ಯ ಬೆಳೆಸಿ ಆದನ್ನು ರಾಷ್ಟ್ರದ ಅಭಿವೃದ್ಧಿಗೆ ಹೇಗೆ ಬಳಸಿ ಕೊಳ್ಳಬೇಕೆಂದು ಜನರಲ್ಲಿ ತಿಳಿವಳಿಕೆ ಮೂಡಿಸುವುದು.

೪. ಮಹಿಳೆಯರ ಪಾತ್ರ ಮತ್ತು ಹಕ್ಕುಗಳ ಬಗ್ಗೆ ಈಗಿರುವ ಮನೋಭಾವ ಮತ್ತು ಮೌಲ್ಯಗಳನ್ನು ಬದಲಾಯಿಸುವುದು.

೫. ಮಹಿಳಾ ಅಭಿವೃದ್ಧಿಗೆ ಮಾರಕವಾಗಿರುವ ಎಲ್ಲಾ ಅಡ್ಡಿಗಳನ್ನು ತೊಡೆದುಹಾಕುವುದು ಮಹಿಳಾ ಅಧ್ಯಯನದ ಮೂಲ ಉದ್ದೇಶ.

೬. ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಕ್ರಿಯೆಯಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಅಭಿವೃದ್ಧಿಯಲ್ಲಿ ಮಹಿಳೆಯರ ಭಾಗವಹಿಸುವಿಕೆಯನ್ನು ಹೆಚ್ಚಿಸುವುದು.

೭. ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆಯರನ್ನು ಸಂಪನ್ಮೂಲ ವ್ಯಕ್ತಿಗಳನ್ನಾಗಿ ಬೆಳೆಸುವುದು. ಈಗಿರುವ ಮೌಲ್ಯಗಳನ್ನು ಪ್ರಶ್ನಿಸುವುದು. ಮಹಿಳೆಯರ ಸಮಾನ ಭಾಗವಹಿಸುವಿಕೆಯನ್ನು ಹೆಚ್ಚಿಸುವುದಕ್ಕೆ ಅವರಲ್ಲಿ ಸಾಮಾಜಿಕ ಜವಾಬ್ದಾರಿಗಳ ಅರಿವು ಮೂಡಿಸುವುದು.

೮. ನಮ್ಮ ಸಮೂಹ ಮಾಧ್ಯಮ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಸ್ಥೆಗಳು ಮಹಿಳೆಯರನ್ನು ಉತ್ಪಾದಕತೆಯಿಂದ ಅನುತ್ಪಾದಕತೆ ಮತ್ತು ಪುನರುತ್ಪಾದಕತೆಯೆಡೆಗೆ ಒಯ್ಯುತ್ತದೆ. ಈ ಸಂಸ್ಥೆಗಳಲ್ಲಿ ಕಂಡು ಬರುವ ಮಹಿಳಾ ವಿರೋಧಿ ಅಂಶಗಳನ್ನು ವಿರೋಧಿಸುವುದು ಮಹಿಳಾ ಅಧ್ಯಯನದ ಉದ್ದೇಶ.

೯. ವಿಶ್ವ ವಿದ್ಯಾಲಯದ ಶಿಕ್ಷಣ ವ್ಯವಸ್ಥೆಯನ್ನು ಪ್ರಚಲಿತ ಸಾಮಾಜಿಕ ಸಮಸ್ಯೆಗಳಿಗೆ ಹತ್ತಿರವಾಗಿಸಿ ಅವುಗಳನ್ನು ಬಗೆಹರಿಸುತ್ತಿದ್ದು ಮತ್ತು ಮಹಿಳಾಭಿವೃದ್ಧಿಯಲ್ಲಿ ಸಕ್ರಿಯವಾಗಿ ಕಾರ್ಯ ಬದ್ಧತೆಯಿಂದ ಕೆಲಸ ಮಾಡುವ ವೃತ್ತಿಗಳನ್ನು ಬೆಳೆಸುವುದು.

೧೦. ಸಾಮಾಜಿಕ ಸಮಾನತೆ, ಲಿಂಗ ಸಮಾನತೆ, ಜಾತ್ಯಾತೀತ ಸಮಾಜವಾದ ಮತ್ತು ಪ್ರಜಾಪ್ರಭುತ್ವಗಳ ಮೌಲ್ಯಗಳನ್ನು ಎತ್ತಿ ಹಿಡಿದು ಶಿಕ್ಷಕರಲ್ಲಿ ಲಿಂಗಬೇಧ ಭಾವ ಇಲ್ಲದಂತಹ ಶಿಕ್ಷಣದ ಆಗತ್ಯದ ಅರಿವನ್ನು ಮೂಡಿಸುವುದು.

೧೧. ಮಹಿಳಾ ಅಧ್ಯಯನವು ಅಂತರ್‌ಶಾಸ್ತ್ರೀಯ ವಿಷಯವಾಗಿರುವುದರಿಂದ ಬೋಧನೆ, ಪಠ್ಯಕ್ರಮದ ಮಾದರಿ, ಸಂಶೋಧನೆ, ಸಮೀಕ್ಷೆ, ಅಧ್ಯಯನ ಮತ್ತು ಇತರ ಚಟುವಟಿಕೆಗಳಿಗೆ ಸಂಬಂಧಪಟ್ಟಂತೆ ಬೇರೆ ಬೇರೆ ಅಧ್ಯಯನ ಇಲಾಖೆಗಳು ಒಟ್ಟಿಗೆ ಸೇರಿಕೊಂಡು ಕೆಲಸ ಮಾಡುವುದು.

೧೨. ಮಹಿಳೆಯರ ಕುರಿತು ವಾಸ್ತವ ಮಾಹಿತಿ ಸಂಗ್ರಹಿಸಲು, ಅಭಿವೃದ್ಧಿ ಕಾರ್ಯಗಳನ್ನು ಮೌಲ್ಯೀಕರಿಸಿ ಅವುಗಳಲ್ಲಿ ತಿದ್ದುಪಡಿ ತರುವುದು, ಹಾಗೂ ಗ್ರಾಮೀಣ ಮಟ್ಟದಲ್ಲಿ ಮಹಿಳೆಯರ ಪರಿಸ್ಥಿತಿ ಮತ್ತು ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಕ್ಷೇತ್ರ ಅಧ್ಯಯನ ಮತ್ತು ಕ್ಷೇತ್ರ ಕಾರ್ಯಗಳನ್ನು ಕೈಗೊಳ್ಳುವುದು ಮಹಿಳಾ ಅಧ್ಯಯನದ ಉದ್ದೇಶ. ಇದಕ್ಕಾಗಿ ಉನ್ನತ ಶಿಕ್ಷಣ ಸಂಸ್ಥೆಗಳಿಗೂ ಮತ್ತು ಮಹಿಳಾ ಅಭಿವೃದ್ದಿ ಕಾರ್ಯದಲ್ಲಿ ನೇರವಾಗಿ ತೊಡಗಿರುವ ಗುಂಪುಗಳ ನಡುವೆ ಸಂಪರ್ಕ ಕಲ್ಪಿಸಬೇಕಾಗುತ್ತದೆ. ಈ

ರೀತಿಯ ಸಂಪರ್ಕ ವಿಶ್ವವಿದ್ಯಾಲಯ ಮತ್ತು ಕಾಲೇಜುಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ಅರ್ಥಪೂರ್ಣವಾಗಿ ವಿಸ್ತರಿಸಿಕೊಳ್ಳಲು ಸಹಾಯವಾಗುತ್ತದೆ.

ಮಹಿಳಾ ಅಧ್ಯಯನ ಏಕಮುಖೀ ಚರ್ಚೆಯಲ್ಲ, ಬದಲಾಗಿ ಇಂದು ಬಹುಮುಖೀ ಅಧ್ಯಯನಕ್ಕೆ ಸಂಬಂಧಪಟ್ಟಿದ್ದು ಎಂಬ ತಿಳುವಳಿಕೆಯನ್ನು ಮೂಡಿಸುವುದು.

ಭಾರತದಲ್ಲಿ ಮಹಿಳಾ ಅಧ್ಯಯನದ ಬೆಳವಣಿಗೆಯಲ್ಲಿ ಮಹಿಳಾ ಚಳುವಳಿಯ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಮಹಿಳಾ ಅಧ್ಯಯನ ಮತ್ತು ಮಹಿಳಾ ಚಳುವಳಿ ಎರಡೂ ಒಂದಕ್ಕೊಂದು ಪೂರಕವಾಗಿ ಬೆಳೆಯುತ್ತಿರುವುದು ವಿಶೇಷವಾಗಿದೆ. ಮಹಿಳಾ ಅಧ್ಯಯನದ ಪರಿಕಲ್ಪನೆ, ಸಿದ್ದಾಂತ, ಚಿಂತನೆ, ಕ್ರಿಯಾತ್ಮಕ ಚಟುವಟಿಕೆ ಅವುಗಳ ಯಶಸ್ಸು ಮತ್ತು ವಿಫಲತೆ, ಮಹಿಳಾ ವಿಷಯಗಳ ಕುರಿತು ಸಂಶೋಧನೆ, ಅಧ್ಯಯನ ಸಮೀಕ್ಷೆ, ಮಹಿಳಾ ಚಳುವಳಿಯ ಹೋರಾಟ, ತಂತ್ರವಿಧಾನ, ಪ್ರಕ್ರಿಯೆ ಮತ್ತು ಪರಿಣಾಮಗಳನ್ನು ದಾಖಲಿಸುವ ನಿಟ್ಟಿನಲ್ಲಿ ಹಲವಾರು ಸಂಘ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಇವು ಭಾಷೆ, ಸಂಸ್ಕೃತಿ, ವರ್ಗ, ಧರ್ಮ ಮತ್ತು ಪ್ರದೇಶಗಳ ಮಿತಿಯನ್ನು ಮೀರಿ ಮಹಿಳೆಯರ ಜೀವನ, ದುಡಿಮೆ, ಹೋರಾಟ, ಸಮಸ್ಯೆಗಳ ಕುರಿತು ಶೈಕ್ಷಣಿಕ ಹಾಗೂ ಕ್ರಿಯಾತ್ಮಕವಾಗಿ ಕೆಲಸ ಮಾಡುತ್ತಿವೆ.

## ಅಡಿ ಟಿಪ್ಪಣಿಗಳು:

೧. ಡಾ|| ಡಿ. ಮಂಗಳ ಪ್ರಿಯದರ್ಶಿನಿ - ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ. ಪುಟ - ೧೧

೨. ಡಾ|| ಹೇಮಲತಾ ಎಚ್.ಎಂ. - ಮಹಿಳಾ ಅಧ್ಯಾಯನ - ೧. ಪುಟ - ೧೭

೩. ಅದೇ. ಪುಟ - ೧೯



# ಅಧ್ಯಾಯ:೩

# ವೇದ-ಪುರಾಣ-ಮಹಾಕಾವ್ಯಗಳಲ್ಲಿ ಮಹಿಳೆ

# ಅಧ್ಯಾಯ: ೩

## ವೇದ - ಪುರಾಣ - ಮಹಾಕಾವ್ಯಗಳಲ್ಲಿ ಮಹಿಳೆ

### ಅ) ವೇದಗಳಲ್ಲಿ ಮಹಿಳೆ:

ಭಾರತೀಯ ಸಂಸ್ಕೃತಿಯನ್ನು ಅರಿಯಲು ಇರುವ ಅತ್ಯಂತ ಪ್ರಾಚೀನವಾದ ಗ್ರಂಥಗಳೆಂದರೆ ವೇದಗಳು. ''ವೇದಗಳ ರಚನೆಯ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲವಾದರೂ ಅವುಗಳ ಭಾಷೆ ಮೊದಲಾದುವುಗಳ ಆಧಾರದಿಂದ ಸುಮಾರು ಕ್ರಿ.ಪೂ.೧೦೦೦ದ ಹೊತ್ತಿಗಾಗಲೇ ಋಗ್ವೇದ ರೂಪಿತವಾಗಿತ್ತೆಂದು ವಿದ್ವಾಂಸರು ಊಹಿಸಿದ್ದಾರೆ''[೧]. ಬಹುಶಃ ಕ್ರಿ.ಪೂ.೧೦೦೦ಕ್ಕಿಂತ ಬಹಳ ಹಿಂದಿನಿಂದಲೂ ವೇದಗಳ ರಚನೆಯ ಪೂರ್ವ ಸಿದ್ಧತೆ ನಡೆದು, ಕೊನೆಯಲ್ಲಿ ಅದು ಆ ರೂಪವನ್ನು ಪಡೆದಿರಬೇಕು. ಋಗ್ವೇದದಲ್ಲಿ ವ್ಯಕ್ತವಾದ ಸಾಮಾಜಿಕ ಅಂಶಗಳೂ ಇದಕ್ಕೆ ಸಮರ್ಥನೆಯನ್ನು ಒದಗಿಸುತ್ತವೆ. ಅಷ್ಟೊಂದು ಪರಿಣತವಾದ ಸಾಮಾಜಿಕ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಅಂಶಗಳು ಇದ್ದಕ್ಕಿದ್ದಂತೆಯೇ ರೂಪುಗೊಂಡು ಹೊರಹೊಮ್ಮಲಾರವು. ಅದಕ್ಕೆ ಅವಶ್ಯಕವಾದ ಹಿನ್ನೆಲೆ ಸಾಕಷ್ಟು ಕಾಲದಿಂದಲೂ ಬೆಳೆದು ಬಂದು ಆ ಅನುಭವದ ಫಲವಾಗಿ ವೇದಗಳು ಮೂಡಿದವು.

'ವೇದ' ಎಂದರೆ ಅರಿವು, ತಿಳಿವು, ಜ್ಞಾನ ಎಂಬ ಅರ್ಥ ಬರುತ್ತದೆ. ಅದರಲ್ಲಿಯೂ 'ಪರಾತ್ಪರ'ಶಕ್ತಿಯನ್ನು ಪ್ರತಿನಿಧಿಸುವ ದೇವತೆಗಳನ್ನು ಕುರಿತ ಜ್ಞಾನ ಎಂಬರ್ಥ ಇಲ್ಲಿ ಕಂಡುಬರುತ್ತದೆ. ಈ ಜ್ಞಾನವನ್ನು ತಿಳಿಸಿಕೊಡುವುದಕ್ಕಾಗಿಯೇ ವೇದಗಳು ಹುಟ್ಟಿದವು. ವೇದಗಳಲ್ಲೆಲ್ಲಾ ಋಗ್ವೇದವೇ ಅತ್ಯಂತ ಪ್ರಾಚೀನ. ಅನಂತರ ಯಜುರ್ವೇದ, ಸಾಮವೇದಗಳು ಹುಟ್ಟಿದವು. ಮೊದಮೊದಲು ಈ ಮೂರೇ ವೇದಗಳೆಂಬ ಭಾವನೆಯಿತ್ತು. ಅನಂತರ ಅಥರ್ವಣವೂ ಇವುಗಳ ಜೊತೆಗೆ ವೇದವಾಗಿ ಸೇರಿತು. ಈ ನಾಲ್ಕು ವೇದಗಳು ಧಾರ್ಮಿಕ ಗ್ರಂಥಗಳಾದರೂ ಆ ಕಾಲದ ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುವುದರಿಂದ ಮತ್ತು ಇತರ ವಿಷಯಗಳ ಜೊತೆಗೆ ಸ್ತ್ರೀಯರ ಸ್ಥಾನಮಾನ ಕುರಿತ ಸಾಹಿತ್ಯಕ ಆಧಾರಗಳು ಇಲ್ಲಿ ದೊರೆಯುವುದರಿಂದ ವೇದಗಳ ಕಾಲದಲ್ಲಿ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯಲು ಸಹಾಯಕವಾಗಿವೆ.

ವೇದಗಳಲ್ಲಿ ಅತ್ಯಂತ ಪ್ರಾಚೀನವಾದುದ್ದು ಮತ್ತು ಬೃಹತ್ತಾದುದ್ದು 'ಋಗ್ವೇದ'.

"'ಋಕ್' ಎಂದರೆ ಸೂಕ್ತಿಪರವಾದ ಪದ್ಯ ಎಂದರ್ಥ. ಋಗ್ವೇದದಲ್ಲಿ ೧೦೨೮ ಸೂಕ್ತಿಗಳಿದ್ದು ೧೦,೫೦೦ ಪದ್ಯಗಳು ಹತ್ತು ಅಧ್ಯಾಯಗಳ ವಿಸ್ತಾರದಲ್ಲಿ ಅಡಕಗೊಂಡಿವೆ" [೨]. ಸುಮಾರು ಕ್ರಿ.ಪೂ. ೧೧ ಅಥವಾ ೧೦ನೇ ಶತಮಾನದಲ್ಲಿ ಆರ್ಯ ಬುಡಕಟ್ಟಿನ ಬೇರೆ ಬೇರೆ ಸಮೂಹಗಳಿಂದ ಅಂದರೆ ಸಾಮೂಹಿಕ ಸೃಜನಶೀಲತೆಯಿಂದ ರಚಿತಗೊಂಡಂತೆ ಇವು ಕಾಣುತ್ತವೆ. ಅದೇನೇ ಇರಲಿ ವೇದಗಳ ಆರಂಭದ ಕಾಲದಲ್ಲಿನ ಮಹಿಳೆಯ ಜೀವನ ಸ್ಥಿತಿ ಉತ್ತಮವಾಗಿರುವುದು ಕಂಡು ಬರುತ್ತದೆ. ಋಗ್ವೇದ ಕಾಲದ ನಾರಿ, ಶಕ್ತಿ ಮತ್ತು ಔದಾರ್ಯದ ಪ್ರತೀಕವಾಗಿದ್ದಾಳೆ.

## ಸ್ತ್ರೀಯರು ಹೊಂದಿದ್ದ ಸ್ವಾತಂತ್ರ್ಯ:

ವೇದಗಳ ಕಾಲದ ಸ್ತ್ರೀಯರು ಹಲವಾರು ವಿಷಯಗಳಲ್ಲಿ ಪುರುಷರಷ್ಟೇ ಸ್ವತಂತ್ರರಾಗಿದ್ದರು. ಶಿಕ್ಷಣ, ವಿವಾಹ, ವಿವಾಹ ವಿಚ್ಛೇದನ, ಆರ್ಥಿಕ ಉತ್ಪಾದನೆ, ಸಂಪತ್ತಿನ ಅನುಭೋಗ, ಧಾರ್ಮಿಕ ಕ್ರಿಯಾವಿಧಿಗಳ ಆಚರಣೆ ಮುಂತಾದ ವಿಷಯಗಳಲ್ಲಿ ಸ್ತ್ರೀಯರಿಗೆ ಬಹಳಷ್ಟು ಸ್ವಾತಂತ್ರ್ಯ ನೀಡಲಾಗಿತ್ತು. ಕೌಟುಂಬಿಕ ವಿಚಾರಗಳಲ್ಲಿ ಅವರಿಗೆ ಪೂರ್ಣ ಸ್ವಾತಂತ್ರ್ಯ ನೀಡಲಾಗಿತ್ತಲ್ಲದೆ ಪತ್ನಿಯರನ್ನು 'ಅರ್ಧಾಂಗಿನಿ'ಯರೆಂದು ಕರೆಯಲಾಗುತ್ತಿತ್ತು. ವೇದಗಳ ದೃಷ್ಟಿಯಲ್ಲಿ ಸ್ತ್ರೀ ಮತ್ತು ಪುರುಷ ಪರಸ್ಪರ ಪೂರಕರು. ಸ್ತ್ರೀ ಇಲ್ಲದ ಪುರುಷ ಹಾಗೂ ಪುರುಷನಿಲ್ಲದ ಸ್ತ್ರೀ ಅಪರಿಪೂರ್ಣರು. "ಪತ್ನಿಯಿಲ್ಲದ ಪುರುಷ ಅಪರಿಪೂರ್ಣವಾದ ವ್ಯಕ್ತಿ" ಎಂದು ಶತಪಥ ಬ್ರಾಹ್ಮಣ ಸ್ಪಷ್ಟವಾಗಿ ಸಾರಿದೆ[3].

ಸ್ತ್ರೀ, ಪುರುಷರ ಸಂಬಂಧಗಳ ಮೇಲೆ ವೇದಗಳ ಕಾಲದಲ್ಲಿ ಅತಿಯಾದ ಕಟ್ಟುಪಾಡುಗಳಿರಲಿಲ್ಲ. ಬಾಲ್ಯ ವಿವಾಹವು ರೂಢಿಯಲ್ಲಿರಲಿಲ್ಲ. ಮದುವೆಗೆ ಮೊದಲೇ ಮಗಳು ಋತುಮತಿಯಾದರೆ ಅವಳ ತಾಯಿ-ತಂದೆಯರು ನರಕಕ್ಕೆ ಹೋಗುವರೆಂಬ ನಂಬಿಕೆಗಳಿರಲಿಲ್ಲ. ಸ್ತ್ರೀಯರೆಲ್ಲ ಮದುವೆಯಾಗಲೇಬೇಕೆಂಬ ಕಟ್ಟಳೆಗಳಿರಲಿಲ್ಲ. ಒಂದು ವೇಳೆ ಮದುವೆಯಾಗದೆ ಉಳಿದರೆ ಹುಟ್ಟಿದ ಮನೆಯಲ್ಲಿಯೇ ಯಾವ ಸಾರ್ವಜನಿಕ ಖಂಡನೆಯಿಲ್ಲದೆ ಸುಖವಾಗಿರಬಹುದಿತ್ತು. ಯಾವುದೇ ಹೆಣ್ಣನ್ನು ಮದುವೆಯಾದ ಗಂಡು ಒಂದು ವೇಳೆ ಯುದ್ಧ, ಬೇಟೆ, ಕಾಯಿಲೆ ಇಲ್ಲವೇ ಸ್ವಾಭಾವಿಕವಾಗಿಯೇ ಸಾವನ್ನಪ್ಪಿದರೆ ಆತನ ಅಣ್ಣಂದಿರಾಗಲಿ ಅಥವಾ ತಮ್ಮಂದಿರಾಗಲಿ ಆಕೆಯನ್ನು ವಿವಾಹವಾಗಬಹುದಿತ್ತು. ಸತ್ತು ಹೋದ ಗಂಡನನ್ನು ನೆನೆದು ಪ್ರಲಾಪಿಸುತ್ತಿರುವ ವಿಧವೆಯನ್ನು ಸತ್ತವನ ತಮ್ಮ

ಸಮಾಧಾನ ಹೇಳಿ ಸತ್ತವನನ್ನು ಮರೆತು ಯಥಾಪ್ರಕಾರ ಜೀವನ ಸಾಗಿಸಬೇಕೆಂದು ಉಪದೇಶ ಮಾಡಿ ತನ್ನ ಮನೆಗೆ ಕರೆದೊಯ್ಯುವುದು ಋಗ್ವೇದದಲ್ಲಿ ಕಂಡು ಬರುತ್ತದೆ. ಮದುವೆಯಾದ ನಾಲ್ಕು ದಿನದಲ್ಲಿಯೇ ನವ ದಂಪತಿಗಳು ಸಮಾಗಮಗೊಳ್ಳುತ್ತಿದ್ದರು ಎಂಬ ಉಲ್ಲೇಖ ವಿರುವುದರಿಂದ ಬಾಲ್ಯ ವಿವಾಹ ಪದ್ಧತಿ ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಯುವಕ ಯುವತಿಯರೇ ಆಗಿನ ಕಾಲದಲ್ಲಿ ವಿವಾಹವಾಗುತ್ತಿದ್ದರು ಎಂಬುದೂ ತಿಳಿದು ಬರುತ್ತದೆ.

'' 'ಸಾಮನ' ಹಬ್ಬದಲ್ಲಿ ತರುಣ-ತರುಣಿಯರು ಲಿಂಗ ಭೇದವಿಲ್ಲದೆ ಭಾಗವಹಿಸುತ್ತಿದ್ದು ತರುಣಿಯರು ಶೃಂಗರಿಸಿಕೊಂಡು ಹೋಗುವುದು, ಯುವತಿಯರ ಮನಸ್ಸನ್ನು ಆಕರ್ಷಿಸುವ ಯುವಕರನ್ನು ಕುರಿತು ಋಗ್ವೇದದಲ್ಲಿ ಹೇಳಲಾಗಿದೆ'' [೪].

ಮದುವೆಯ ಸಂದರ್ಭದಲ್ಲಿ ಪುರೋಹಿತ ವಧುವಿಗೆ ಹೀಗೆಂದು ಆಶೀರ್ವದಿಸುತ್ತಾನೆ. ''ಮಾವನಿಗೆ ಸಾಮ್ರಾಜ್ಞಿಯಾಗಿರು, ಅತ್ತೆಗೆ ಸಾಮ್ರಾಜ್ಞಿಯಾಗಿರು; ನಾದಿನಿಯರಿಗೆ ಮತ್ತು ಮೈದುನರಿಗೆ ಸಾಮ್ರಾಜ್ಞಿಯಾಗಿರು, ಮನೆಯಲ್ಲಿರುವ ಪರಿವಾರದವರೊಂದಿಗೆ ಗೃಹ ಪತ್ನಿಯ ಅಂದರೆ, ಮನೆಯೊಡತಿಯ ಅಧಿಕಾರದೊಡನೆ ಮಾತನಾಡು; ದ್ವಿಪಾದಿಗಳು ಮತ್ತು ಚತುಷ್ಪಾದಿಗಳು - ಅಂದರೆ ಪಶು ಪಕ್ಷಿಗಳ ವಿಷಯದಲ್ಲಿ ಕಲ್ಯಾಣಿಯಾಗಿರು' ಎನ್ನುತ್ತಾನೆ'' [೫].

ಇಲ್ಲಿ ಹೆಣ್ಣು ಪುರುಷನ ಅಧಿಕಾರಕ್ಕೆ ಹತ್ತಿರವೇ ಇದ್ದಾಳೆ. ಪತ್ನಿಯ ಸ್ಥಾನಮಾನಗಳು ಉನ್ನತವಾಗಿಯೇ ಇವೆ. ಋಗ್ವೇದ ಕಾಲದ ಹೆಣ್ಣು ಮನೆಯೊಡತಿ, ಮನೆಯ ಆಗು ಹೋಗುಗಳೆಲ್ಲ ಇವಳ ಅಧೀನದಲ್ಲಿವೆ. ಮನೆಯ ಸೇವಕರು, ಹಣಕಾಸು, ವಹಿವಾಟು, ಪಶು ಸಂಪತ್ತು ಎಲ್ಲವುಗಳಲ್ಲಿಯೂ ಹೆಣ್ಣಿನ ಸ್ವಾಮ್ಯವಿದೆ. ಪತಿಯೊಂದಿಗೆ ಅಧಿಕಾರ ಪೂರ್ವಕವಾಗಿ ಯಜ್ಞಾನುಷ್ಠಾನಗಳಲ್ಲಿ ಪಾಲ್ಗೊಳುತ್ತಾಳೆ.

### ಸ್ತ್ರೀಯರಿಗೂ ಶಿಕ್ಷಣದಲ್ಲಿ ಸಮಾನ ಅವಕಾಶ:

ವೇದಗಳ ಕಾಲದಲ್ಲಿ ಬಾಲಕಿಯರಿಗೂ 'ಉಪನಯನ' ಸಂಸ್ಕಾರ ನೀಡಿ ವೇದಾಧ್ಯಾಯನಕ್ಕೆ ಸನ್ನದ್ಧಗೊಳಿಸಲಾಗುತ್ತಿತ್ತು. ಅಥರ್ವಣ ವೇದವು ''ಸ್ತ್ರೀಯೊಬ್ಬಳ ವೈವಾಹಿಕ ಜೀವನದ ಯಶಸ್ಸು ಆಕೆಗೆ ಆಕೆಯ ಬ್ರಹ್ಮಚರ್ಯದಲ್ಲಿ ನೀಡಲಾದ ಸುಯೋಗ್ಯವಾದ ಶಿಕ್ಷಣವನ್ನು ಹೊಂದಿಕೊಂಡಿರುತ್ತದೆ ಎಂದು ತಿಳಿಸುತ್ತದೆ. ಋಗ್ವೇದದ

ಮಂತ್ರಗಳನ್ನು ರಚಿಸುವಲ್ಲಿ ಕನಿಷ್ಠ ೨೦ ಮಂದಿ ಸ್ತ್ರೀಯರು ಭಾಗಿಗಳಾಗಿದ್ದರು ಎಂದು ನಂಬಲಾಗಿದೆ'' [೬]. ಅಸಾಧಾರಣ ಪಾಂಡಿತ್ಯವುಳ್ಳ ಸ್ತ್ರೀಯರ ಹೆಸರುಗಳ ಉಲ್ಲೇಖಗಳನ್ನು ವೇದ ಸಾಹಿತ್ಯದಲ್ಲಿ ಗುರುತಿಸಬಹುದು. ಉದಾ: ಲೋಪಾಮುದ್ರಾ, ಅಪಲಾ, ವಿಶ್ವಾವರಾ, ಘೋಷ, ಸಿಕತಾ, ನಿವಾವರಿ, ಇಂದ್ರಾಣಿ, ಗೃಹ್ಯಸೂತ್ರವು ಶ್ರೇಷ್ಠ ಬ್ರಹ್ಮವಾದಿನಿಯರಾಗಿದ್ದ (ತತ್ವಜ್ಞಾನಿಗಳು) ಸುಲಭಾ, ಮೈತ್ರೇಯಿ, ಗಾರ್ಗಿ, ಅಪಲಾ ಮುಂತಾದವರ ಹೆಸರುಗಳನ್ನು ನಿತ್ಯವೂ ನೆನಪಿಸಿಕೊಳ್ಳಬೇಕೆಂದು ತಿಳಿಸುವುದು. ತನ್ನ ಸಹೋದರರ ಜೊತೆ ಅಧ್ಯಯನ ಮಾಡುತ್ತಾಳೆ, ಶಸ್ತ್ರವಿದ್ಯೆಯನ್ನು ಕಲಿಯುತ್ತಾಳೆ. ಗಂಡನಂತೆಯೇ ಯುದ್ಧದಲ್ಲಿಯೂ ಭಾಗವಹಿಸುತ್ತಾಳೆ. ಶತ್ರುಗಳ ಬೆನ್ನಟ್ಟುತ್ತಾಳೆ. ಹಾಲು ಕರೆಯುವುದು, ದವಸಧಾನ್ಯಗಳನ್ನು ಆರಿಸುವುದು, ಹೊಲಿಗೆ - ಕಸೂತಿ, ನೀರು ತರುವುದು, ಅಡಿಗೆ ಮಾಡುವುದು, ಯಜ್ಞಕ್ಕೆ ಸಿದ್ಧತೆ ಮಾಡುವುದು, ಮನೆಯ ಆಗು - ಹೋಗುಗಳನ್ನೆಲ್ಲಾ ನೋಡಿಕೊಳ್ಳುವುದು ಈ ಎಲ್ಲವೂ ಹೆಣ್ಣಿನ ಗೌರವ ಪೂರ್ವಕ ಕಾರ್ಯಗಳೆಂದು ಪರಿಗಣಿತವಾಗಿದ್ದ ಕಾಲವದು.

### ಕೌಟುಂಬಿಕ ವಿಚಾರಗಳಲ್ಲಿ ಸ್ತ್ರೀಯರ ಸ್ಥಾನಮಾನ:

ವೇದಕಾಲದ ಸ್ತ್ರೀಯರಿಗೆ ವಿವಾಹದ ವಿಷಯದಲ್ಲಿ ಇದ್ದಷ್ಟು ಮುಕ್ತ ಸ್ವಾತಂತ್ರ್ಯ ಕೌಟುಂಬಿಕ ವಿಚಾರಗಳಲ್ಲಿ ಇರಲಿಲ್ಲವೆನ್ನಿಸುತ್ತದೆ. ವೇದಕಾಲದ ಕುಟುಂಬವು ಪಿತೃ ಯಾಜಮಾನದ ರೀತಿಯದು: ಮಾತೃ ಯಾಜಮಾನದ ಕುಟುಂಬವು ಆಗ ಇದ್ದಿರಲಿಲ್ಲ. ಕುಟುಂಬದಲ್ಲಿ ಪುತ್ರಿಯ ಜನನವು ಪುತ್ರನ ಜನನದಷ್ಟು ಸ್ವಾಗತಾರ್ಹವಾಗಿರಲಿಲ್ಲ. ಆದರೆ ಹೆಣ್ಣು ಮಕ್ಕಳನ್ನು ಅಲಕ್ಷಿಸದೆ ಅವರಿಗೂ ಸೂಕ್ತ ಶಿಕ್ಷಣ ಕೊಡಿಸುವ ವ್ಯವಸ್ಥೆ ಆಗಿನದಾಗಿತ್ತು. ಗಂಡು ಮಕ್ಕಳಂತೆ ಅವರು, ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದರು. ಬ್ರಹ್ಮಚಾರಿಣಿಯಾಗಿ ವಿದ್ಯಾಭ್ಯಾಸ ಮಾಡದಿದ್ದ ವಧುವಿಗೆ ಒಳ್ಳೆಯ ವರನೊಡನೆ ವಿವಾಹದ ಯೋಗವಿರಲಿಲ್ಲವೆಂದು ಅಥರ್ವಣ ವೇದವು ಅಭಿಪ್ರಾಯಪಡುತ್ತದೆ [7]. ಗಂಡ ಹೆಂಡಿರು ಹೆಚ್ಚು ಕಡಿಮೆ ಸಮಾನರಾಗಿದ್ದು 'ದಂಪತಿ' ಶಬ್ದವು ಮನೆಗೆ ಗಂಡಹೆಂಡಿರಿಬ್ಬರೂ ಸಂಯುಕ್ತ ನಾಯಕರೆಂದು ಪರಿಗಣಿಸಲ್ಪಡುತ್ತಿದ್ದರೆಂಬುದನ್ನು ಸೂಚಿಸುವುದು.

ಆ ಕಾಲದ ಮಹಿಳೆ ಯುದ್ಧರಂಗದಲ್ಲಿಯೂ ತನ್ನ ಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಾಳೆ. ಪುರುಷ ಋಷಿಗಳಂತೆಯೇ ಅನೇಕ ಮಹಿಳೆಯರು ತಪೋನುಷ್ಠಾನಗಳನ್ನು ಕೈಗೊಳ್ಳುತ್ತಾರೆ. ಆಗಿನ ಮಹಿಳೆಯರು ಋಷಿಗಳು, ಕಲಿಗಳು, ಋಗ್ವೇದ ಸೂತ್ರಗಳ

ಕರ್ತೃಗಳೂ ಆಗಿರುವುದನ್ನು ಕಾಣುತ್ತೇವೆ. ಪುರುಷ ಋಷಿಗಳ ಮಂತ್ರಗಳ ವಿಷಯದಲ್ಲಿ ತೋರುವ ಶ್ರದ್ಧೆ-ನಿಷ್ಠೆಗಳನ್ನೇ ಋಗ್ವೇದ ಕಾಲದ ಆರ್ಯರು ಮಹಿಳಾ ಋಷಿಗಳ ಮಂತ್ರಗಳ ವಿಷಯದಲ್ಲೂ ತೋರುತ್ತಿದ್ದುದಾಗಿ ತಿಳಿದು ಬರುತ್ತದೆ. ಆರ್ಯರಿಗೆ ಅಂದು ಜನಬಲ ಅಗತ್ಯವಿತ್ತು. ಹತ್ತು ಮಕ್ಕಳ ತಂದೆ ತಾಯಿಯರಾಗುವುದೇ ಆದರ್ಶವಾಗಿತ್ತು. ಹಾಗೂ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಯಾವುದೇ ಪದ್ಧತಿಯನ್ನು ಆಚರಿಸುತ್ತಿರಲಿಲ್ಲ.

ವೇದಗಳ ಆದಿಯಲ್ಲಿ ಮಹಿಳೆಯರು ತಮ್ಮ ಕೌಟುಂಬಿಕ ಪರಿಸರದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಬದುಕಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸ್ವಾತಂತ್ರ್ಯ ಮತ್ತು ಸವಲತ್ತುಗಳನ್ನು ಅನುಭವಿಸುತ್ತಿದ್ದರು. ಆರ್ಥಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದು, ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸುತ್ತಾ ಉತ್ತಮ ಸ್ಥಾನ ಹೊಂದಿದ್ದರು. ಪುರುಷನ ಪ್ರವೇಶವಿರುವ ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆಯರಿಗೂ ಪ್ರವೇಶವಿರುವುದು ಮತ್ತು ಯಾವುದೇ ತಾರತಮ್ಯವಿಲ್ಲದೆ ಸವಲತ್ತುಗಳನ್ನು ಅನುಭವಿಸುವ ಅವಕಾಶವಿತ್ತು. ಆದ್ದರಿಂದ ಮಹಿಳೆಯನ್ನು ದೂರವಿಡುತ್ತಿದ್ದ ನಿದರ್ಶನಗಳು ಋಗ್ವೇದದ ಕಾಲದಲ್ಲಿ ಕಾಣುವುದಿಲ್ಲ.

ಋಗ್ವೇದ ಕಾಲದ ನಾರಿ ಶಕ್ತಿ ಮತ್ತು ಸ್ವಾತಂತ್ರ್ಯದ ಪ್ರತೀಕವಾಗಿದ್ದು ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಅಧಿಕಾರವಿರುವಂತೆಯೇ ಹೆಣ್ಣು ಮಗಳಿಗೂ ಸಮಾನ ಅಧಿಕಾರವಿದೆ. ಯುವತಿಯಾಗಿ ತನ್ನ ಗಂಡನನ್ನು ತಾನೆ ಆಯ್ಕೆ ಮಾಡಿಕೊಳ್ಳಬಲ್ಲವ ಳಾಗಿದ್ದಳು. ಹೀಗಾಗಿ ಹೆಣ್ಣಿನ ಸ್ಥಾನಮಾನಗಳು ಉನ್ನತವಾಗಿದ್ದವು.

ಋಗ್ವೇದದಲ್ಲಿಯೇ 'ದಾಸ' ಎಂಬ ಪದ ಬಂದಿದೆ. ಚಾತುರ್ವರ್ಣದಲ್ಲಿ ಕೊನೆಯವರೆಂದರೆ ದಾಸರು ಎಂಬುದು ಆರೋಪಿತವಾಯಿತು. ಆದ್ದರಿಂದ ಪುರೋಹಿತರು ಶೂದ್ರರನ್ನು ದಾಸ್ಯದಲ್ಲಿಟ್ಟುಕೊಂಡು ತಮ್ಮ ಸೇವೆಗೆ ದುಡಿಸಿಕೊಳ್ಳುವುದು ಮೊದಲಾಯಿತು. ಕಾಲಾನಂತರದಲ್ಲಿ ಸ್ತ್ರೀಯರೂ ಆ ಸ್ಥಾನಕ್ಕೆ ತಳ್ಳಲ್ಪಟ್ಟರು.

ಋಗ್ವೇದ ಕಾಲದ ತರುವಾಯ ಉತ್ತರ ವೈದಿಕ ಕಾಲ ಆರಂಭವಾಯಿತು. ಆ ಅವಧಿಯಲ್ಲಿ ಇತರ ವೇದಗಳು, ಬ್ರಾಹ್ಮಣಗಳು, ಅರಣ್ಯಕಗಳು, ಉಪನಿಷತ್ತುಗಳು ಮುಂತಾದವು ರಚಿತವಾದವು. ಆರ್ಯರು ಆರ್ಯೇತರರೊಂದಿಗೆ ಯುದ್ಧ ಮಾಡುತ್ತಿದ್ದರು.

ಅಂದರೆ ಇದು ವರ್ಣ-ವರ್ಗಗಳ ಹೋರಾಟವಾಗಿತ್ತು. ಆ ಸಂದರ್ಭದಲ್ಲಿ ಸ್ತ್ರೀ-ಪುರುಷನ ನಡುವಿನ ಸಂಬಂಧದಲ್ಲಿ ದೊಡ್ಡ ಗೋಡೆ ನಿರ್ಮಾಣವಾಯಿತು. ಆಗ ನಿರ್ಮಿತಗೊಂಡ ಅಸಮಾನತೆಯ ಗೋಡೆಯನ್ನು ಇಂದಿಗೂ ಉರುಳಿಸುವುದು ಸಾಧ್ಯವಾಗಿಲ್ಲ. ಆದ್ದರಿಂದ ಋಗ್ವೇದ ಕಾಲಕ್ಕೆ ಪರಸ್ಪರ ಕಾದಾಟ, ಅಸೂಯೆ, ಸವತಿ ವೈಷಮ್ಯ, ಭೂ ಒಡೆತನದ ಹೋರಾಟಗಳು ಕಂಡು ಬರುತ್ತವೆ. ಹೀಗಾಗಿ ನಾರಿಯ ಅಧಿಕಾರಿಗಳ ಮೇರೆಯನ್ನು ಗುರುತಿಸುವ ಕಾರ್ಯ ಆ ಹೊತ್ತಿಗಾಗಲೇ ಆರಂಭವಾಗಿರುವುದು ಕಂಡು ಬರುತ್ತದೆ. ಋಗ್ವೇದ ಕಾಲಕ್ಕಿಂತಲೂ ಹಿಂದೆಯೇ ಪುರುಷರು ಮಾತೃಪ್ರಧಾನ ವ್ಯವಸ್ಥೆಗೆ ಬದಲಾಗಿ ಪಿತೃಪ್ರಧಾನ ವ್ಯವಸ್ಥೆಯ ಸರಹದ್ದುಗಳನ್ನು ನಿರ್ಮಿಸುತ್ತಾ ಇತರ ಸಮುದಾಯಗಳಿಗೆ ಸೇರಿದ ನಾರಿಯರನ್ನು ಗೆದ್ದು ತಂದು ತಮ್ಮ ಸಮಾಜದಲ್ಲಿ ಸೇರಿಸಿಕೊಳ್ಳಲಾರಂಭಿಸಿದರು. ಗೆದ್ದು (ಶತ್ರುಗಳಿಂದ) ತರಲಾಗಿದ್ದ ನಾರಿಯರ ಸಂಖ್ಯೆ ಆರ್ಯ ಸಮಾಜದಲ್ಲಿ ಹೆಚ್ಚುತ್ತಾ ಹೋಯಿತು. ರಾಜರುಗಳ ಅಂತಃಪುರದಲ್ಲಿಯೂ ಇವರ ಸಂಖ್ಯೆ ಹೆಚ್ಚಿತು. ಇಂಥ ದಾಸಿಯರನ್ನು ತುಂಬಿದ ರಥಗಳನ್ನು ರಾಜರು ತಮ್ಮ ಪುರೋಹಿತರಿಗೆ ದಾನವಾಗಿ ಕೊಡತೊಡಗಿದರು. ಹೀಗೆ ಮಹಿಳೆಯರನ್ನು ನಿರ್ಲಕ್ಷಿಸುವುದಕ್ಕೆ ಮತ್ತು ಪೀಡಿಸುವುದಕ್ಕೆ ಅಗತ್ಯವಾದ ನೆಲೆ ಆ ಕಾಲಕ್ಕೆ ನಿರ್ಮಾಣಗೊಂಡಿತು.

ವೇದಗಳ ಕಾಲದಲ್ಲಿಯೇ ಆಚರಣೆಗೆ ಬಂದ ಬಹು ಪತ್ನಿತ್ವ ಪದ್ಧತಿ ಮಹಿಳೆಯರ ಹೀನ ಸ್ಥಿತಿಗೆ ಕಾರಣವಾಯಿತು. ಋಗ್ವೇದೋತ್ತರ ಕಾಲದಲ್ಲಿದ್ದ ಪುರುಷ ಸ್ತ್ರೀಯರನ್ನು ತನ್ನ ಸೊತ್ತೆಂದು ಕಾಣಲಾರಂಭಿಸಿದ. ಸ್ತ್ರೀಯರು ತನ್ನ ದೈಹಿಕ ಸುಖಕ್ಕೆ ಮಾತ್ರ ಇರುವುದು ಎಂದು ಪುರುಷ ಭಾವಿಸಿದ. ದೇಹದ ಸುಖ ಮತ್ತು ಸಂಪತ್ತಿನವರ್ದನೆ ಎರಡೂ ಮದುವೆಯಾಗುವುದರಿಂದ ದೊರೆಯಲಾರಂಭಿಸಿತು. ಈಗಲೂ ಆಫ್ರಿಕೆಯ ಕಾಡು ಜನರಲ್ಲಿ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದು ಬಹುಪತ್ನಿಯರಿಂದಲೇ, ಇಂಥ ಸಂಪ್ರದಾಯ ಹೆಣ್ಣಿನ ಅಧೋಗತಿಗೆ ಕಾರಣವಾಯಿತು.

ಅಥರ್ವಣ ವೇದದ ಮುಖ್ಯ ವಸ್ತು ಮಾಟಮಂತ್ರಗಳು. ಯಂತ್ರ-ತಂತ್ರಗಳು, ಭೂತ ಪ್ರೇತೋಚ್ಚಾಟನೆಗಳು, ಆಯುಷ್ಯ ಕರ್ಮಗಳು, ಶಾಂತಿ ಕರ್ಮಗಳು ಆಗಿದ್ದರೂ ಹೆಂಗಸರ ಸುಖಕ್ಕಾಗಿ; ವಶಕ್ಕಾಗಿ ಮಾಡುವ ಸ್ತ್ರೀ ಕರ್ಮಗಳೂ ಇವೆ.

ದಾಸಿಯರನ್ನು ದಾನ ಕೊಡುವ ಪದ್ಧತಿ ಇರುವುದು ವೇದಗಳ ಕಾಲದಲ್ಲಿಯೇ ಕಂಡು

ಬರುತ್ತದೆ. ಹೀಗೆ ದಾನ ಮಾಡುವ ಸಂದರ್ಭದಲ್ಲಿ ಪಠಿಸಬೇಕಾದ ದಾನಸ್ತುತಿಗಳು ವೇದಗಳಲ್ಲಿವೆ. ಈ ಬಗೆಯ ದಾನದಿಂದ ಅಂತಃಪುರವನ್ನು ತುಂಬುತ್ತಿದ್ದ ತರುಣಿಯರು ಹೆಚ್ಚಾಗಿ ಆರ್ಯೇತರರಾಗಿರುತ್ತಿದ್ದರು. ಅವರಲ್ಲಿ ಮುಖ್ಯವಾಗಿ ದಲಿತ ನಾರಿಯರು. ಈ ನಾರಿಯರು ಆರ್ಯರ ಹೆಂಡತಿಯರಿಗಿಂತಲೂ ಆಕರ್ಷಕರಾಗಿದ್ದು ಆರ್ಯರು ಈ ನಾರಿಯರ ಸೌಂದರ್ಯಕ್ಕೆ ಮರುಳಾಗಿ ಅನುಭೋಗಿಸುತ್ತಿದ್ದರು ಎಂಬ ಮಾತನ್ನು ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆಯಲ್ಲಿ ಭಗವತ್ ಶರಣ ಉಪಾಧ್ಯಾಯರು ಹೇಳುತ್ತಾರೆ. ಈ ದಾಸಿಯರನ್ನು ಭೋಗಿಸಿ ಅನಂತರದಲ್ಲಿ ಪುರೋಹಿತರಿಗೆ ದಾನ ಮಾಡುತ್ತಿದ್ದರು. ಅದೇನೆ ಇರಲಿ ವೇದಗಳ ಕಾಲದಲ್ಲಿಯೇ ನಾರಿಯರನ್ನು ಆರ್ಯರು ತೊತ್ತಿನ ಆಳುಗಳಾಗಿ, ಭೋಗದ ವಸ್ತುಗಳಾಗಿ ಕಂಡಿರುವುದು ಸ್ಪಷ್ಟವಿದೆ.

ಉತ್ತರ ವೇದಗಳ ಕಾಲದಲ್ಲಿ ಧಾರ್ಮಿಕ ಕಟ್ಟುಪಾಡುಗಳು ಕಟ್ಟುನಿಟ್ಟಾಗಿ ಅನುಷ್ಠಾನಗೊಂಡವು. ವಿವಾಹವೆಂದರೆ ಆತ್ಮಗಳ ಸಮ್ಮಿಲನ ಎಂಬ ಅರ್ಥವಿದ್ದ ಜಾಗದಲ್ಲಿ ಅದೊಂದು ಐಕ್ಯ ಎಂಬ ಅಭಿಪ್ರಾಯವಾಯಿತು. ವಿವಾಹವಾಗುತ್ತಿದ್ದಂತೆ ಹೆಣ್ಣು ಪುರುಷನಲ್ಲಿ ಐಕ್ಯಳಾಗುತ್ತಾಳೆ ಎಂಬ ಅರ್ಥ ಪ್ರಧಾನವಾಯಿತು. ಹೆಂಡತಿಯೇ ಗಂಡನಲ್ಲಿ ಐಕ್ಯಳಾದ ಮೇಲೆ ಹೆಣ್ಣಿಗೆ ಅಸ್ತಿತ್ವದ ಹಕ್ಕಿಲ್ಲವೆಂದ ಮೇಲೆ ಆಕೆಗೆ ಆಸ್ತಿಯ ಹಕ್ಕು ಇರಲಿಲ್ಲ. ತಂದೆಯ ಆಸ್ತಿಯಲ್ಲಿ ಮಗಳಿಗೆ ಹಕ್ಕಿರಲಿಲ್ಲ. ಗಂಡು ಮಕ್ಕಳಿಗೆ ನೀಡಿದ ಪಿತ್ರಾರ್ಜಿತ ಆಸ್ತಿಯ ೧/೪ ಭಾಗ ಮಾತ್ರ ಅವಿವಾಹಿತ ಮಗಳಿಗೆ ಲಭ್ಯವಿತ್ತು. ತಂದೆಯ ನಂತರ ಆಸ್ತಿಯು ಸಾಮಾನ್ಯವಾಗಿ ಗಂಡು ಮಕ್ಕಳಿಗೆ ಸಲ್ಲುತ್ತಿತ್ತು. 'ದುರ್ಬಲ'ರೆಂಬ ಕಾರಣದಿಂದ ಸ್ತ್ರೀಯರಿಗೆ ಪಿತೃ ಸ್ವತ್ತಿನ ಉತ್ತರಾಧಿಕಾರವಿಲ್ಲವೆಂದು ವೇದ ಗ್ರಂಥಗಳು ತಿಳಿಸುತ್ತವೆ. ತಂದೆಗೆ ಗಂಡು ಮಕ್ಕಳಿಲ್ಲದ ಸಂದರ್ಭದಲ್ಲಿ ಮಗಳಿಗೆ ಪಿತ್ರಾರ್ಜಿತ ಸೊತ್ತಿನ ಅಧಿಕಾರಕ್ಕೆ ಅವಕಾಶ ನೀಡಲಾಗುತ್ತಿತ್ತು. ಸ್ತ್ರೀಯರಿಗೆ ತಮ್ಮ ವಿವಾಹದ ಸಮಯದಲ್ಲಿ ಕೊಡಲ್ಪಟ್ಟ ಉಡುಗೊರೆ, ಆಭರಣ, ಭೂಮಿ ಮುಂತಾದ 'ಸ್ತ್ರೀಧನ'ವೆಂದು ಕರೆಯಲ್ಪಟ್ಟ ಆಸ್ತಿಯ ಮೇಲೆ ಮಾತ್ರ ಅಧಿಕಾರವಿತ್ತು. ಆಕೆಯು ಸತ್ತ ನಂತರ ಆಕೆಯ 'ಸ್ತ್ರೀಧನ' ವೆಂದೇ ಕರೆಯಲ್ಪಡುತ್ತಿದ್ದ ಆಸ್ತಿಯು ಅವಿವಾಹಿತ ಹೆಣ್ಣು ಮಕ್ಕಳಿಗೆ ಮಾತ್ರ ಸಲ್ಲುತ್ತಿತ್ತು.

ವೈದಿಕ ಯುಗದ ಕೊನೆ ಕೊನೆಗೆ ಭಾರತೀಯ ಸಮಾಜದಲ್ಲಿ ಅನೇಕ ಪರಿವರ್ತನೆಗಳು ಆಗಿರುವುದು ಕಂಡುಬರುತ್ತದೆ. ಅಥರ್ವಣ ವೇದದ ನಂತರದಲ್ಲಿ ವೇದಗಳನ್ನು ಕುರಿತ

ವಿಶ್ಲೇಷಣಾ ಗ್ರಂಥಗಳು ರಚಿತವಾದವು. ಅವುಗಳನ್ನೆ ಬ್ರಾಹ್ಮಣಗಳು, ಉಪನಿಷತ್ತುಗಳು, ಅರಣ್ಯಕಗಳು, ನೀತಿಸಂಹಿತೆಗಳೆಂದು ಕರೆಯುವುದು. ಆ ಕಾಲಕ್ಕೆ ವರ್ಣಾಶ್ರಮಗಳು ರೂಪುಗೊಂಡಿದ್ದವು. ಅವುಗಳ ಪರಿಣಾಮವಾಗಿ ಪುರೋಹಿತ ವರ್ಗ ಹೊಟ್ಟೆ ಬಟ್ಟೆಗಾಗಿ ದುಡಿಯುವುದನ್ನು ಬಿಟ್ಟು ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಳ್ಳಲು ಮತ್ತು ಶ್ರಮಿಕರ ಸೇವೆಯನ್ನು ಪಡೆಯಲು ಉಚ್ಚ, ನೀಚ, ಪವಿತ್ರ, ಅಪವಿತ್ರ, ಶ್ರೇಷ್ಠ- ಹೀನ ಎಂಬ ವಿಚಾರಗಳನ್ನು ಆಚರಣೆಗೆ ತಂದರು. ಲಿಂಗಗಳ ವಿಷಯದಲ್ಲಿ ಪುರುಷ ಶ್ರೇಷ್ಠ, ಸ್ತ್ರೀ ನೀಚಳು ಎಂಬುದು ರೂಢಿಗೆ ಬಂತು. ಋತು ಕಾಲದಲ್ಲಿ ಗರ್ಭಿಣಿ ಸಮಯದಲ್ಲಿ, ಬಾಣಂತನ ಕಾಲದಲ್ಲಿ ಸ್ತ್ರೀಯರು ಅಪವಿತ್ರರೆಂದು ಪರಿಗಣಿಸಿದರು. ಗಂಡು ಮಗನಿಲ್ಲದಿದ್ದರೆ ಮೃತನಾದವನಿಗೆ ಸ್ವರ್ಗ ಸಿಗುವುದಿಲ್ಲ ಎಂಬ ನಂಬಿಕೆಗಳು ಬಲವಾಗಿ ಬೇರೂರಿದ್ದವು.

ಬ್ರಾಹ್ಮಣಗಳು ಸ್ತ್ರೀಯರ ವಿಷಯದಲ್ಲಿ ವೇದಗಳಿಗಿಂತ ಕಠಿಣವಾಗಿವೆ. ಶತಪಥ ಬ್ರಾಹ್ಮಣದಲ್ಲಿ ಗಂಡನು ಊಟ ಮಾಡಿದ ಮೇಲೆ ಹೆಂಡತಿಯು ಊಟ ಮಾಡತಕ್ಕದ್ದು, ಗಂಡನು ಎಷ್ಟು ಬಯ್ದರೂ ಬೈಸಿಕೊಳ್ಳಬೇಕು, ತಿರುಗಿ ಉತ್ತರ ಕೊಡದಿದ್ದರೆ ಮಾತ್ರ ಆಕೆ ಒಳ್ಳೆಯ ಹೆಂಡತಿಯೆಂದು ಹೇಳಲಾಗಿದೆ. ಒಂದು ವೇಳೆ ತಿರುಗಿ ಉತ್ತರ ಕೊಟ್ಟು ಅವಿಧೇಯಳಾಗಿ ನಡೆದುಕೊಂಡರೆ ಆಕೆಯನ್ನು ಗಂಡನಾದವನು ಹೊಡೆದರೂ ಸರಿ ಎಂದು ಹೇಳಲಾಗಿದೆ. ಹೀಗಾಗಿ ಬ್ರಾಹ್ಮಣಕಗಳು ಹೆಣ್ಣು ಮಕ್ಕಳ ವಿಷಯದಲ್ಲಿ ತುಂಬಾ ಕಠೋರವಾದ ನಿಯಮಗಳನ್ನು ಹೇಳುವುದಲ್ಲದೆ, ಹೆಣ್ಣು ಮಕ್ಕಳ ಜನನವು ಅಪ್ರಿಯವೆಂದು ಸೂಚಿಸಿದೆ.

ಉಪನಿಷತ್ತುಗಳ ಕಾಲದಲ್ಲಿ ಸ್ತ್ರೀಯರು ವೇದಗಳನ್ನು ಓದುವುದನ್ನು ನಿಷೇಧಿಸಲಾಗಿಲ್ಲ. ಆದ್ದರಿಂದ ಧರ್ಮೋಪದೇಶಕ್ಕೂ ಸ್ತ್ರೀಯರು ಅರ್ಹರಾಗಿರುವುದು ಕಂಡು ಬರುತ್ತದೆ.

ಒಟ್ಟಾರೆ ವೇದಗಳ ಆರಂಭದಲ್ಲಿ ಮಹಿಳೆಯರಿಗೆ ಇದ್ದ ಮಾನ್ಯತೆಗಳು ಕ್ರಮೇಣ ಕಡಿಮೆಯಾಗಿವೆ. ಮೊದಲಿಗೆ ವೇದಾಧ್ಯಯನಕ್ಕೆ ಹೆಣ್ಣಿಗೆ ನಿಷೇಧ ಹೇರಿ ನಂತರದಲ್ಲಿ ವ್ಯಾಕರಣ, ಮೀಮಾಂಸೆ, ಶಿಕ್ಷಾ, ತರ್ಕ, ನಿರುಕ್ತ, ಛಂದಸ್ ಮತ್ತು ಜ್ಯೋತಿಷ್ಯಾಧ್ಯಯನವನ್ನು ಸ್ತ್ರೀಯರಿಗೆ ನಿರಾಕರಿಸಲಾಗಿದೆ. ಇದರಿಂದ ಹೆಣ್ಣು ಆ ಕಾಲದಿಂದಲೇ ಕತ್ತಲೆಗೆ ನೂಕುತ್ತಾ, ಸಿಲುಕುತ್ತಾ ಬಂದಿರುವುದು ಸ್ಪಷ್ಟವಾಗಿದೆ.

## ಆ) ಪುರಾಣ - ಮಹಾಕಾವ್ಯಗಳಲ್ಲಿ ಮಹಿಳೆ:

ಉಪನಿಷತ್ತುಗಳ ದಿವ್ಯ ಆದರ್ಶ, ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿ ಧರ್ಮವು ಜನತೆಯ ಉಸಿರಾಗುವಂತೆ ಮಾಡಿದ ಕೀರ್ತಿ ಇತಿಹಾಸ ಪುರಾಣಗಳದ್ದು. ದೇವತೆಗಳನ್ನು ಕುರಿತ ಕಲ್ಪನೆಯ ಕಥೆಗಳು ವೇದಗಳ ಕಾಲದಿಂದಲೂ ಬೆಳೆದು ಬಂದಿದ್ದವು. ಆರ್ಯರು ತಮ್ಮ ಜೀವನದ ಸೋಲು ಗೆಲುವುಗಳನ್ನೇ, ದೇವತೆಗಳಿಗೆ ಆರೋಪಿಸಿ ಕಥೆಯನ್ನು ಕಟ್ಟುತ್ತಿದ್ದುದ್ದೂ ಉಂಟು. ಹೀಗೆ ಕಥೆಯನ್ನು ಕಟ್ಟುವ ಕಲ್ಪನಾ ಪ್ರತಿಭೆ ಇತಿಹಾಸ ಪುರಾಣಗಳಲ್ಲಿ ವಿಶೇಷವಾಗಿ ಬೆಳೆದಿದೆ. ಅದು ಕೆಲವು ವೇಳೆ ಬಹಳ ಅರ್ಥವತ್ತಾಗಿ ಇಡೀ ಜನಾಂಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುವಷ್ಟು ಸಶಕ್ತವಾಗಿ ಮೂಡಿ ಬಂದಿದೆ. ಪುರಾಣಗಳು ಹಿಂದೂ ಧರ್ಮಕ್ಕೆ ವ್ಯಾಪಕತೆಯನ್ನು ತಂದುಕೊಟ್ಟವೆ. ವೇದ ಮೊದಲಾದ ಧರ್ಮಗ್ರಂಥಗಳ ಜ್ಞಾನ ಭಂಡಾರ ಕೇವಲ ಕೆಲವರ ಸ್ವತ್ತಾಗಿತ್ತು. ಶೂದ್ರರಿಗೂ, ಸ್ತ್ರೀಯರಿಗೂ ವೇದವನ್ನೋದಲು ಅಧಿಕಾರವಿಲ್ಲವೆಂಬ ಸಂಕುಚಿತ ಮಟ್ಟಕ್ಕೆ ವೈದಿಕ ಸಂಸ್ಕೃತಿ ಇಳಿದಿತ್ತು. ಧರ್ಮದ ಕಟ್ಟಳೆಗಳಿಂದ ಜನತೆ ವಂಚಿತವಾಗಿತ್ತು. ಅದನ್ನು ಕಂಡು ಒಂದು ಕಡೆ ಬೌದ್ಧ ಜೈನಮತಗಳ ಪ್ರತಿಕ್ರಿಯೆಗಳು ತಲೆದೋರಿದಂತೆ, ವೈದಿಕ ಧರ್ಮದ ಅನುಯಾಯಿಗಳಾದ ಕೆಲವು ಋಷಿಗಳ ಹೃದಯ ಅನುಕಂಪೆಯಿಂದ ಮಿಡಿಯಿತು. ಆಗ ಅವರು ವರ್ಣಗಳ ತಾರತಮ್ಯವಿಲ್ಲದೆ ಎಲ್ಲರೂ ಓದಬಹುದಾದ ಗ್ರಂಥಗಳಲ್ಲಿ ವೇದೋಪನಿಷತ್ತುಗಳ ಸಾರವನ್ನೆಲ್ಲಾ ಅಡಕಗೊಳಿಸಲು ಪ್ರಯತ್ನಿಸಿದರು. ಅದರ ಫಲವಾಗಿ ಅನೇಕ ಪುರಾಣಗಳು ಹುಟ್ಟಿದವು. ರಾಮಾಯಣ, ಮಹಾಭಾರತ ಮಹಾಕಾವ್ಯಗಳು ಸೃಷ್ಟಿಯಾದವು. ಮಹಾಭಾರತವಂತೂ ಭಗವದ್ಗೀತೆಯನ್ನು ಪಡೆದು ಪಂಚಮ ವೇದವೆಂದು ಪ್ರಸಿದ್ಧವಾಯಿತು.

ವೇದಗಳ ಕಾಲದ ನಂತರದಲ್ಲಿ ಭಾರತೀಯ ಸಾಹಿತ್ಯದಲ್ಲಿ ಕಾಣಿಸಿಕೊಂಡ ಮಹಾಕಾವ್ಯಗಳು, ಪುರಾಣಗಳು ಮತ್ತು ಧರ್ಮಶಾಸ್ತ್ರಗಳೂ ಕೂಡಾ ಅವು ರಚಿತಗೊಂಡ ಕಾಲದ ಜನಮನದ ಆಲೋಚನೆ ಮತ್ತು ನಿಜ ಬದುಕಿನ ಚಿತ್ರಣಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ವೇದೋತ್ತರ ಕಾಲದಲ್ಲಿ ರಚಿತಗೊಂಡ ಸಾಹಿತ್ಯದಲ್ಲಿ ಹೆಣ್ಣಿನ ಚಿತ್ರಣ ಬಂದಿರುವ ಬಗೆಯನ್ನು ಸ್ಥೂಲವಾಗಿ ಇಲ್ಲಿ ವಿವೇಚಿಸಲಾಗಿದೆ.

ಪ್ರಸ್ತುತ ನಮ್ಮ ಕಣ್ಣೆದುರಿಗೆ ಮಹಿಳೆಯ ಮೇಲೆ ನಡೆಯುತ್ತಿರುವ ಎಲ್ಲಾ ಬಗೆಯ ಶೋಷಣೆ ರಾಮಾಯಣ, ಮಹಾಭಾರತ, ಪುರಾಣಗಳು ಮತ್ತು ಧರ್ಮಸೂತ್ರಗಳಲ್ಲಿಯೂ

ನಡೆದಿರುವುದು ಸ್ಪಷ್ಟವಿದೆ. ಸಾವಿರಾರು ವರ್ಷಗಳಿಂದಲೂ ಹೆಣ್ಣಿನ ಮಾನಪಹರಣ, ಹೆಣ್ಣಿನ ಅಪಹರಣ, ಬಹುಪತ್ನಿತ್ವ, ವನವಾಸ, ಬಾಲ್ಯವಿವಾಹ, ಗಂಧರ್ವ ವಿವಾಹ, ಸತಿಪದ್ಧತಿ, ಅಗ್ನಿ ಪ್ರವೇಶ, ದಾಸಿ ಪದ್ಧತಿ, ಹೆಣ್ಣನ್ನು ಮಾರುವುದು, ಒತ್ತೆ ಇಡುವುದು, ಕಿವಿ, ಮೂಗು ಕತ್ತರಿಸುವುದು ಹೀಗೆ ಒಂದಲ್ಲ ಒಂದು ಕಾರಣಕ್ಕೆ ಹೆಣ್ಣು ನರಳಿದ್ದಾಳೆ. ಆ ಸ್ಥಿತಿಗೆ ಪುರುಷರೇ ಕಾರಣರಾದರೂ ಅವರಿಗೆ ಶಿಕ್ಷೆಯಾಗುವುದೇ ಇಲ್ಲ, ಬದಲು ಭಾರತೀಯ ಪರಂಪರೆಯಲ್ಲಿ ಪೂಜನಿಯರೆನಿಸಿದ್ದಾರೆ.

ವೇದಗಳ ಕಾಲದ ನಂತರ ಮನುಷ್ಯನ ಸಾಮಾಜಿಕ ಜೀವನ ಚಿತ್ರಣ ದೊರೆಯುವುದು ಮಹಾಭಾರತ ಮತ್ತು ರಾಮಾಯಣಗಳಲ್ಲಿ. ರಾಮಾಯಣದಲ್ಲಿರುವ ಪಾವಿತ್ರ್ಯದ ಕಲ್ಪನೆ ಮಹಾಭಾರತದಲ್ಲಿಲ್ಲ. ರಾಮಾಯಣದಲ್ಲಿ ಪುರೋಹಿತಶಾಹಿ ಪ್ರಾಬಲ್ಯ ಹೆಚ್ಚಾಗಿರುವುದು ಕಂಡು ಬರುತ್ತದೆ. ಮಹಾಭಾರತದಲ್ಲಿ ಸಾಮಾನ್ಯರ ಚಿತ್ರಣಕ್ಕೆ ಹೆಚ್ಚು ಮಹತ್ವವಿದೆ. ಸೋಮವಂಶದ ಸ್ಥಾಪಕ ವಿಚಿತ್ರವೀರ್ಯ, ಆತನ ತಂದೆ ಶಂತನು ಮದುವೆಯಾದದ್ದು ಮತ್ಸ್ಯಗಂಧಿ, ಮೀನುಗಾರರವಳು. ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಂದಲೇ ಕೌರವ ಪಾಂಡವರ ಸಂತತಿ ಬೆಳೆದದ್ದು ಹೀಗೆ. ಅಂತರ್ ಜನಾಂಗ ವಿವಾಹಗಳು ನಡೆಯುತ್ತಿದ್ದು, ಗಾಂಧರ್ವ ವಿವಾಹಗಳಾಗುತ್ತಿದ್ದುದು ಸ್ಪಷ್ಟವಿದೆ.

ಮತ್ಸ್ಯಗಂಧಿ ಶಂತನುವ ಕೂಡುವ ಮೊದಲೇ ಪರಾಶರ ಋಷಿಯನ್ನು ಕೂಡಿ ಮಹಾಭಾರತದ ಕರ್ತೃವಾದ ವ್ಯಾಸ ಮಹರ್ಷಿಯನ್ನು ಹಡೆದಿರುತ್ತಾಳೆ. ಚಿತ್ರವೀರ್ಯ ವಿಚಿತ್ರವೀರ್ಯರು ಅಂಬಿಕೆ, ಅಂಬಾಲಿಕೆಯರನ್ನು ಮದುವೆಯಾಗುತ್ತಾರೆ. ಮಕ್ಕಳಾಗುವ ಮೊದಲೆ ಚಿತ್ರವೀರ್ಯ, ವಿಚಿತ್ರವೀರ್ಯರು ಸಾಯುತ್ತಾರೆ. ಆಗಿನ ಸಂಪ್ರದಾಯದಂತೆ ಯಾವುದೇ ಮನೆತನದ ಪುರುಷರು ಮಕ್ಕಳಾಗದೆ ಸತ್ತರೆ ಆತನ ಹೆಂಡತಿಗೆ ಬೇರೆ ಯಾವ ಪುರುಷನಾದರೂ ಮಕ್ಕಳ ಪ್ರಾಪ್ತಿಯನ್ನು ಕೊಡಬಹುದಾಗಿತ್ತು. ಆದ್ದರಿಂದ ಮತ್ಸ್ಯಗಂಧಿ (ಸತ್ಯವತಿ) ವ್ಯಾಸ ಮಹರ್ಷಿಯನ್ನು ಅಂಬಿಕೆ-ಅಂಬಾಲಿಕೆಯರೊಂದಿಗೆ ಸೇರುವಂತೆ ಕೇಳಿಕೊಳ್ಳುತ್ತಾಳೆ. ತಾಯಿಯ ಮಾತನ್ನು ನಿರಾಕರಿಸಲಾಗದ ವ್ಯಾಸ ಅಂಬಿಕೆ-ಅಂಬಾಲಿಕೆ ಯರನ್ನು ಆಲಂಗಿಸಿದಾಗ ಅಂಬಿಕೆ ನಾಚಿಕೆಯಿಂದ ಕಣ್ಣು ಮುಚ್ಚಿಕೊಳ್ಳುತ್ತಾಳೆ. ಆದ್ದರಿಂದ ಕುರುಡ ಧೃತರಾಷ್ಟ್ರ, ಅಂಬಾಲಿಕೆ ಬಿಳಚಿಕೊಂಡಿದ್ದರಿಂದ ಬಿಳುಪುರೋಗ ಪೀಡಿತನಾದ ಪಾಂಡವು ಹುಟ್ಟುತ್ತಾನೆ. ಇಲ್ಲಿಯು ಪುರುಷರ ವಿರೂಪ ಹುಟ್ಟಿಗೆ ಸ್ತ್ರೀಯರೇ ಕಾರಣ

ಎಂಬಂತೆ ಹೇಳುತ್ತಾರೆ.

ಕುಂತಿಯ ಕಥೆಯೇ ವಿಚಿತ್ರ. ಬೋಜರಾಜನ ಮಗಳಾದ ಕುಂತಿ ಬಾಲ್ಯದಲ್ಲಿ ದೂರ್ವಾಸ ಮುನಿಗಳ ಸೇವೆಯನ್ನು ಮಾಡಿದ್ದರಿಂದ ಆತ ಮೆಚ್ಚಿ ಐದು ಮಂತ್ರಗಳನ್ನು ಉಪದೇಶಿಸುತ್ತಾನೆ. ಆ ಐದು ಸಹ ಸಂತಾನಾಪೇಕ್ಷ ಮಂತ್ರಗಳೆ. ಆಕೆ ಕುತೂಹಲದಿಂದ ಸೂರ್ಯಮಂತ್ರ ಜಪಿಸಿ ದೂರ್ವಾಸರ ವರಪರೀಕ್ಷೆ ಮಾಡೇ ಬಿಡುತ್ತಾಳೆ. ಕರ್ಣ ಜನಿಸಿ ಬಿಡುತ್ತಾನೆ. ಜನಾಪವಾದಕ್ಕಂಜಿ ಆ ಮಗುವನ್ನು ಗಂಗೆಯಲ್ಲಿ ತೇಲಿ ಬಿಡುತ್ತಾಳೆ. ಅದು ಸೂತನ ಕೈಗೆ ಸಿಕ್ಕಿ ಕರ್ಣ ಅಲ್ಲಿ ಬೆಳೆಯುತ್ತಾನೆ. ಕಥೆ ಏನೇ ಇರಲಿ ಈಗಲೂ ಆಗತಾನೇ ಹುಟ್ಟಿದ ಕೂಸನ್ನು ತೊಟ್ಟಿಯಲ್ಲಿ ಹಾಕಿದ್ದರು ಎಂದೆಲ್ಲ ಪತ್ರಿಕೆಯಲ್ಲಿ ಓದುತ್ತಿರುತ್ತೇವೆ. ಮಾತ್ರವಲ್ಲ ಸಮಾಜಕ್ಕೆ ಅಂಜಿ ಇಂಥ ಕೃತ್ಯಗಳು ನಿತ್ಯವೂ ನಡೆಯುತ್ತಿವೆ. ಒಂದು ವೇಳೆ ಮದುವೆಯಾಗದೆ ಮಗುವನ್ನು ಪಡೆದ ಹೆಣ್ಣು ಅದನ್ನು ಸಾಕಿ ಬೆಳೆಸುವ, ಆ ಮಗು ಸಮಾಜದ ಕೊಡುಗೆಯಂತೆ ರೂಪಿಸುವ ಹೊಣೆಗಾರಿಕೆಯನ್ನು ಆ ತಾಯಿ ಮತ್ತು ಆಕೆಯ ತಾಯ್ತನಕ್ಕೆ ಕಾರಣನಾದವನು ತೆಗೆದುಕೊಳ್ಳಬೇಕು. ಇದೊಂದು ಅಸಹಜ, ಅಪಮಾನ ಕಾರ್ಯ ಎಂದು ಭಾವಿಸಬಾರದು. ಹಾಗೆ ಭಾವಿಸಿದಲ್ಲಿ ಮಹಾಭಾರತದಲ್ಲಿ ಕುಂತಿಯ ನಡವಳಿಕೆಗೂ ಈಗಿನ ಸಮಾಜದ ಹೆಣ್ಣಿನ ನಡವಳಿಕೆಗೂ ಯಾವ ವ್ಯತ್ಯಾಸವೂ ಇರುವುದಿಲ್ಲ.

ಮಾದ್ರಿಯ ಸ್ಥಿತಿ ಇನ್ನೂ ಘೋರ ಮತ್ತು ಕ್ರೂರ. ಪಾಂಡು ಬಿಳುಪು ರೋಗದ ನಿರ್ವೀರ್ಯ. ಇವನಿಗೂ ಇಬ್ಬರು ಹೆಂಡತಿಯರು. ಕುಂತಿ ಮತ್ತು ಮಾದ್ರಿ. ಅಲ್ಲದೆ ಪಾಂಡು - ಮಾದ್ರಿಯರ ಸಮಾಗಮಕ್ಕೂ ಮುನಿಶಾಪವಿದೆ. ಇಬ್ಬರಿಗೂ ಅದು ಗೊತ್ತಿದೆ. ಆದ್ದರಿಂದ ಮಾದ್ರಿ ತನ್ನ ಇಡೀ ಯೌವನವನ್ನು ಸಂಯಮದಲ್ಲಿಯೇ ಕಳೆದಿದ್ದಾಳೆ. ಆದರೆ ಪಾಂಡುವಿಗೆ ಸಂಯಮವಿಲ್ಲ. ಅವಳನ್ನು ಬಯಸಿ ಕೊನೆಗೆ ಸಾಯುತ್ತಾನೆ. ಗಂಡ ಸತ್ತನೆಂದರೆ ಹೆಂಡತಿಯಾದವಳು ಸಹಗಮನ ಮಾಡಿಯೇ ತೀರಬೇಕು. ಪರಂಪರಾಗತವಾದ ಈ ಸಂಪ್ರದಾಯ ಎಂಥ ಜೀವ ವಿರೋಧಿ; ಅದನ್ನು ವಿರೋಧಿಸುವ ಒಬ್ಬ ಮಹಿಳೆಯೂ ಆ ಕಾಲಕ್ಕೆ ಕಾಣ ಸಿಗುವುದಿಲ್ಲ. ಬಹುಶಃ ವಿರೋದಿಸಿದ್ದರೂ ಸಮಾಜ ಆಕೆಯನ್ನು ಬಿಡುತ್ತಿರಲಿಲ್ಲ.

ಧೃತರಾಷ್ಟ್ರ, ಹುಟ್ಟು ಕುರುಡನಾಗಿರುವುದರಿಂದ ಆತ ಜಗತ್ತಿನ ಸೌಂದರ್ಯವನ್ನು ನೋಡಲಾರನು. ಅದು ಸರಿ ಆದರೆ ಕಣ್ಣಿದ್ದೂ ತನ್ನ ಗಂಡನು ನೋಡಲಾಗದ ಜಗತ್ತನ್ನು ನಾನೂ ನೋಡಬಾರದು ಎಂದು ಕಣ್ಣಿಗೆ ಪಟ್ಟಿಕಟ್ಟಿಕೊಳ್ಳುವ ಹೆಣ್ಣು ಗಾಂಧಾರಿ ಎಲ್ಲರ

ಮೆಚ್ಚುಗೆಗೆ ಪಾತ್ರಳಾಗಿದ್ದಾಳೆ. ಆದರೆ ಇದು ಎಷ್ಟು ಸರಿ. ದ್ರೌಪದಿ ಮಹಾಭಾರತದಲ್ಲಿ ಬರುವ ಅತ್ಯಂತ ಮುಖ್ಯ ಪಾತ್ರ. ನಮ್ಮ ಮಹಾಕಾವ್ಯಗಳಲ್ಲಿ ಪುರಾಣಗಳಲ್ಲಿ ಚಿತ್ರಿತವಾಗಿರುವ ಸ್ತ್ರೀಯರಿಗಿಂತ ವಿಭಿನ್ನವಾದ ಪಾತ್ರ ದ್ರೌಪದಿಯದು. ಆಕೆಗೆ ಐದು ಜನ ಗಂಡಂದಿರು ಅಲ್ಲದೆ ಕರ್ಣನ ಪರಾಕ್ರಮವನ್ನು ಕಂಡು ಆಕೆ ಇವನೂ ಸಹ ತನ್ನ ಗಂಡನಾಗಿದ್ದರೆ ಚೆನ್ನಾಗಿತ್ತು ಎಂದುಕೊಳ್ಳುತ್ತಿದ್ದಳಂತೆ. ಗಂಡಸು ಹತ್ತಾರು ಹೆಂಡತಿಯರನ್ನು ಹೊಂದುತ್ತಿದ್ದ ಕಾಲದಲ್ಲಿ ಹೆಣ್ಣು ಕೂಡ ನಾಲ್ಕಾರು ಗಂಡಂದಿರನ್ನು ಹೊಂದಿ ಸಂಸಾರ ನಡೆಸಿರುವುದು ಆ ಕಾಲದ ಸ್ತ್ರೀ ಸಮಾನತೆಯ ದ್ಯೋತಕ ಎನ್ನಬಹುದೇ. ಇಲ್ಲಿಯೂ ಪುರುಷನೇ ಸ್ವಾರ್ಥಿ, ಅವನೇ ಪ್ರಧಾನ, ಪತ್ನಿಯು, ಪಣಕ್ಕೊಡ್ಡುವ ಆಸ್ತಿಯೂ ಹೌದು.

'ದ್ರೌಪದಿ ವಿಚಿತ್ರ ಸ್ವಭಾವದ ಹೆಣ್ಣು. ಯಾವುದಕ್ಕೂ ಹೆದರದ ದಿಟ್ಟತನದ ಹೆಣ್ಣು ಆಕೆ. ಇಡೀ ಪ್ರಪಂಚದ ಇತಿಹಾಸದಲ್ಲಿ, ಸಾಹಿತ್ಯವಾಙ್ಮಯದಲ್ಲಿ ಅಥವಾ ದಂತ ಕಥೆಯಲ್ಲಿಯೂ ನಮಗೆ ಅಂಥ ಇನ್ನೊಂದು ಹೆಣ್ಣಿನ ಉದಾಹರಣೆ ಸಿಗುವುದಿಲ್ಲ:ಇಂಥ ಸಂಬಂಧಗಳನ್ನು ಹೊತ್ತಿರುವ ಹೆಣ್ಣು ಸಿಗುವುದಿಲ್ಲ ಎನ್ನುತ್ತಾರೆ ಲೋಹಿಯ.

ದುರ್ಯೋಧನ ಹೆಣ್ಣಿನ ಬಗೆಗೆ ಕನಿಷ್ಠ ಗೌರವಿಲ್ಲದವನು. ಆಕೆಯನ್ನು ತುಂಬಿದ ಸಭೆಯಲ್ಲಿ ಎಳೆದು ತಂದು ವಸ್ತ್ರಾಪಹರಣ ಮಾಡುತ್ತಾನೆ. ಅದಕ್ಕೆ ಆಕೆ 'ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು. ಭೀಷ್ಮ ಮೊದಲಾದ ಅತಿರಥರು ಪರಹಿತವ ಬಿಸುಟು ಇಹರರ್ಥ ಭೀತಿಯಲ್ಲಿ' ಎನ್ನುತ್ತಾಳೆ. ಬಹುಶಃ ಆಕೆಯ ವಸ್ತ್ರಾಪಹರಣವಾಗುವುದನ್ನು ಪಾಂಡವರೈವರು ಮಾತ್ರವಲ್ಲ, ಕೌರವರೆಲ್ಲರೂ, ಅಲ್ಲದೆ ಭೀಷ್ಮಾದಿ ಹಿರಿಯರು ಈ ಸ್ಥಿತಿಯ ದೃಶ್ಯಕಾರ್ಯವನ್ನು ಕಂಡು ಸಹಿಸಿರುವುದು ಆಶ್ಚರ್ಯ ಉಂಟು ಮಾಡುತ್ತದೆ.

ಧರ್ಮಶೀಲನಾದ ಧರ್ಮರಾಯನು ಕೈ ಹಿಡಿದ ಹೆಂಡತಿಯನ್ನೆ ಪಗಡೆಯಾಟದಲ್ಲಿ ಪಣ ಕಟ್ಟುವುದು ಮುಕ್ತ ನಡವಳಿಕೆಯಲ್ಲ ಎಂದು ಸೂಕ್ಷ್ಮ ಜ್ಞಾನದಲ್ಲಿ ದ್ರೌಪದಿ ನಿರ್ಭೀತಳಾಗಿ ಪ್ರಶ್ನಿಸುತ್ತಾಳೆ. ಆದರೆ ಸೀತೆ ಎಲ್ಲವನ್ನೂ ಮೌನವಾಗಿ ಅನುಭವಿಸುತ್ತಾಳೆ. ಆದರೆ ದ್ರೌಪದಿ ಮಾತಿನಿಂದಲೇ ಪಡೆದುಕೊಳ್ಳುತ್ತಾಳೆ. ದ್ರೌಪದಿಯ ಸ್ವಭಾವ ಚಿತ್ರಣವೇ ಬೇರೆ. ಸ್ವಾಭಿಮಾನಿ, ಎದೆಗುಂದದ ಧೈರ್ಯಗಾತಿ ಸೇರಿಗೆ ಸವ್ವಾಸೇರು ಎನ್ನುವಳವಳು. ತನಗೆ ಅವಮಾನ ಮಾಡಿದವನ ರಕ್ತದಲ್ಲಿ ತನ್ನ ಕೂದಲನ್ನು ನೆನಸಿ ಅವನ ಎಲುಬುಗಳನ್ನೇ ಬಾಚಣಿಗೆ ಮಾಡಿಕೊಂಡು ಕೂದಲು ಬಾಚಿ ನನ್ನ ಮುಡಿಕಟ್ಟುವೆ ಎಂದು ಶಪಥ ಮಾಡುತ್ತಾಳೆ.

ರಾಮಾಯಣದ ಯಾವ ಮಹಿಳಾ ಚಿತ್ರಣವನ್ನು ನೋಡಿದರೂ ಅವರು ಒಂದಲ್ಲ ಒಂದು ಯಾತನೆಯನ್ನು ಅನುಭವಿಸಿದವರೆ. ಅದರಲ್ಲೂ ಸೀತೆಯ ಪಾಡಂತೂ ದುಃಖದ ಮಡು. ಇಡೀ ಕಾವ್ಯದಲ್ಲಿ ರಾಮನಂಥ ಆದರ್ಶ ಪುರುಷನನ್ನು ಕೈ ಹಿಡಿದು ಆಕೆ ಒಮ್ಮೆಯೂ ಸುಖಪಡುವುದನ್ನೇ ಕಾಣುವುದಿಲ್ಲ. ಸ್ವಯಂವರದಲ್ಲಿ ಸೀತೆಯ ಕೈ ಹಿಡಿದ ರಾಮ ಅಯೋಧ್ಯೆಗೆ ಬಂದಾಗ, ಪಟ್ಟಾಭಿಷೇಕದ ಸಮಸ್ಯೆ ನಂತರ ವನವಾಸ, ಪತಿಗೆ ತಕ್ಕ ಸತಿ ಎನಿಸಿಕೊಳ್ಳಬೇಕಾದರೆ ಆಕೆಯೂ ಪತಿಯೊಂದಿಗೆ ವನವಾಸಕ್ಕೆ ತೆರಳಲೇಬೇಕು. ಅನಂತರ ರಾವಣನಿಂದ ಅಪಹರಣ, ಯುದ್ಧ ಮಾಡಿ ಬಿಡಿಸಿಕೊಂಡ ಮೇಲೆ ಸೀತೆ ಜೀವನ ಸುಖಮಯ ಎನ್ನುವಷ್ಟರಲ್ಲಿ ಯಾರೋ ರಜಕನ ಮಾತಿಗೆ ಅಂಜಿ ಕಟ್ಟಿಕೊಂಡಿದ್ದ ಹೆಂಡತಿಯನ್ನೇ, ಗರ್ಭಿಣಿ ಸ್ಥಿತಿಯಲ್ಲಿರುವಾಗ ಕಾಡಿಗಟ್ಟುತ್ತಾನೆ. ಸೀತೆಯ ರೂಪ ದಿವ್ಯವಾದದ್ದು, ಮನೋಹರವಾದದ್ದು, ಲಂಕೆಯಲ್ಲಿದ್ದ ನಿನ್ನನ್ನು ನೋಡಿ ರಾವಣ ಬಹುಕಾಲ ಸಹಿಸಿಕೊಂಡಿದ್ದಿರಲಾರ ಎಂದು ರಾಮನೇ ಸೀತೆಯನ್ನು ಪ್ರಶ್ನಿಸುತ್ತಾನೆ. ಆಧುನಿಕ ಕಾಲದಲ್ಲಿಯೂ ಮಹಿಳೆಯರ ಶೀಲದ ಬಗ್ಗೆ ಅನುಮಾನಿಸುವ ಪುರುಷರೇನು ಕಡಿಮೆಯಿಲ್ಲ. ಇದು ಅನಾದಿ ಕಾಲದಿಂದಲೂ ಪುರುಷ ಸ್ತ್ರೀಯನ್ನು ಕಂಡಿರುವ ಬಗೆಯೇ ಹೀಗಿದೆ. ಸೀತೆಯ ಪವಿತ್ರತೆಯನ್ನು ಪರೀಕ್ಷಿಸಲು ಅಗ್ನಿಪ್ರವೇಶ, ಹೀಗೆ ದೈವಾಂಶ ಸಂಭೂತನಾದ ಶ್ರೀರಾಮಚಂದ್ರ ಸೀತೆಯನ್ನು ಲೋಕಾಪವಾದದ ನೆಪದಲ್ಲಿ ಹಿಂಸಿಸಿರುವುದೇ ಹೆಚ್ಚು ಮಾತ್ರವಲ್ಲ, ಲೋಕದಲ್ಲಿ ಹೆಣ್ಣನ್ನು ಹೇಗೆಲ್ಲ ಪರೀಕ್ಷಿಸಬಹುದು ಎಂಬುದಕ್ಕೆ ದಾರಿಯನ್ನೇ ನಿರ್ಮಿಸಿದ ಶ್ರೀರಾಮ. ಈಗಲೂ ಅನೇಕ ಪುರುಷರು ಈ ದಾರಿಯಲ್ಲಿಯೇ ನಡೆಯುತ್ತಿದ್ದಾರೆ.

ದುಷ್ಯಂತ ಆಕಸ್ಮಿಕವೆಂಬಂತೆ ಕಣ್ವರ ಆಶ್ರಮ ಪ್ರವೇಶಿಸುತ್ತಾನೆ. ಅಲ್ಲಿದ್ದ ಶಕುಂತಲೆಯನ್ನು ಭೇಟಿಯಾಗುತ್ತಾನೆ. ಪರಸ್ಪರ ಪ್ರೇಮ ಅವರಿಸಿ ಉಂಗುರ ಬದಲಾವಣೆ ಮಾಡಿಕೊಂಡು ಗಾಂಧರ್ವ ವಿವಾಹ ಮಾಡಿಕೊಳ್ಳುತ್ತಾರೆ. ದೂರ್ವಾಸರು ಕಣ್ವರ ಆಶ್ರಮಕ್ಕೆ ಬಂದಾಗ ದುಷ್ಯಂತನ ಧ್ಯಾನದಲ್ಲಿದ್ದ ಶಕುಂತಲೆಗೆ ದೂರ್ವಾಸರಿಂದ ಶಾಪ, ಇಲ್ಲಿ ಶಕುಂತಲೆಯ ತಪ್ಪೇ ಇಲ್ಲ. ಸೌಂದರ್ಯಕ್ಕೆ ದಾಸನಾಗಿ ರೂಪವತಿಯಾದ ಶಕುಂತಲೆಯನ್ನು ಮೋಹಿಸಿದ ದುಷ್ಯಂತ ಆಕೆಯನ್ನು ನಂಬಿಸಿ ವಶಗೊಳಿಸಿಕೊಂಡು ಸುಖಪಟ್ಟು ನಂತರದಲ್ಲಿ ಮಾತುಕೊಟ್ಟು ಹಿಂದಿರುಗಿದ ದುಷ್ಯಂತ ಕೊನೆಗೆ ಮರೆತು ಬಿಡುವುದೆ! ಇದು ಒಬ್ಬ ಕಪಟ ಪುರುಷನ ಪ್ರತೀಕ.

ಶಕುಂತಲೆಯ ಪ್ರಕರಣಕ್ಕಿಂತ ಅಹಲ್ಯೆ ಪ್ರಕರಣ ಭಿನ್ನವಾಗಿದ್ದರೂ ಇಲ್ಲೂ ಹೆಣ್ಣೇ ಶಾಪಗ್ರಸ್ತಳು. ಗೌತಮ ಮುನಿ ಯಜ್ಞ - ಯಾಗಾದಿಗಳಲ್ಲಿ ತಪಸ್ಸಾಚರಣೆಯಲ್ಲಿ ಮಗ್ನನಾಗಿದ್ದನು. ಹೆಂಡತಿಯ ಅವಶ್ಯಕತೆ ಇಲ್ಲದಿದ್ದರೂ ಸಹಾಯಕಳಾಗಿರಲೆಂದು, ಅಹಲ್ಯೆಯನ್ನು ವಿವಾಹವಾಗಿದ್ದ. ಅಹಲ್ಯೆಯು ಕೂಡ ತನ್ನ ಬೋಗಲಾಲಸೆಗಳನ್ನು ಬದಿಗೊತ್ತಿ ಬದುಕುತ್ತಿರುವಳು. ಇಂಥ ಸಮಯದಲ್ಲಿ ಇಂದ್ರನ ಪ್ರವೇಶ, ಗೌತಮನು ಇಲ್ಲದಿರುವುದನ್ನು ನೋಡಿಕೊಂಡು ಗೌತಮನ ಮಾರುವೇಷದಲ್ಲಿ ಅಹಲ್ಯೆಯ ಬಳಿ ಬಂದರೆ ಇಂದ್ರ ಎಂಬುದು ಗೊತ್ತಾಗಲು ಹೇಗೆ ಸಾಧ್ಯ. ಅದೇ ವೇಳೆಗೆ ಆಶ್ರಮಕ್ಕೆ ಬಂದ ಗೌತಮ ತನ್ನ ದಿವ್ಯ ದೃಷ್ಟಿಯಿಂದ ನಿಜವನ್ನು ತಿಳಿದು ಅಹಲ್ಯೆಗೆ ಶಾಪ ಕೊಡುತ್ತಾನೆ. ಇಂದ್ರನ ಕಪಟವನ್ನು ಅರಿಯದ ನಿರಪರಾಧಿ ಅಹಲ್ಯೆಯನ್ನು ಕಲ್ಲಾಗಿಸಿದ.

ಪುರುಷರಿಂದ ಸ್ತ್ರೀಯ ಮೇಲೆ ದೌರ್ಜನ್ಯವಾದರೂ ಅಂತಿಮವಾಗಿ ಆಕೆಯ ಶಾಪ ವಿಮೋಚನೆಯಾಗಬೇಕಾದರೂ ಪುರುಷನ ಪಾದವೇ ಸೋಕಬೇಕು. ಇಲ್ಲಿಯು ಪುರುಷನ ಅಟ್ಟಹಾಸವೇ.

ಸಪ್ತ ಋಷಿಗಳಲ್ಲಿ ಒಬ್ಬನಾದ ಅತ್ರಿಗೆ ಅನಸೂಯಳೆಂಬ ಹೆಂಡತಿ ಇರುತ್ತಾಳೆ. ತ್ರಿಮೂರ್ತಿಗಳಿಗೆ ಅನಸೂಯೆಯ ಪಾತಿವ್ರತ್ಯವನ್ನು ಪರಿಕ್ಷೀಸಲು ಬ್ರಾಹ್ಮಣರ ವೇಷದಲ್ಲಿ ಅತ್ರಿಯ ಮನೆ ಪ್ರವೇಶಿಸುತ್ತಾರೆ. ಆಗ ಅನಸೂಯೆ ತ್ರಿಮೂರ್ತಿಗಳನ್ನು ಭೋಜನಕ್ಕೆ ಆಹ್ವಾನಿಸಿದಾಗ, ವಿಪ್ರರು ನಮಗೆ ಬಡಿಸುವವರು ದಿಗಂಬರರಾಗಿ ಬಡಿಸಬೇಕು ಎನ್ನುತ್ತಾರೆ. ಋಷಿ ಪತ್ನಿಯನ್ನು ನಗ್ನಳನ್ನಾಗಿಸಿ ಪರೀಕ್ಷಿಸಬಯಸುವ ಬ್ರಹ್ಮ, ವಿಷ್ಣು, ಮಹೇಶ್ವರರು ಎಂಥವರು!

ವಿಶ್ವಾಮಿತ್ರ - ಮೇನಕೆಯರ ಪ್ರಸಂಗ ಕೂಡ ಪುರುಷನ ದೌರ್ಬಲ್ಯವನ್ನು ಹೇಳುವ ಕಥೆ. ದೇವಲೋಕದಲ್ಲೆಲ್ಲ ಶ್ರೇಷ್ಠ ಪದವಿ ದೇವೇಂದ್ರನದು. ಅಂಥ ಪದವಿ ದಕ್ಕಿಸಿಕೊಳ್ಳಲು ವಿಶ್ವಾಮಿತ್ರ ದಿವ್ಯ ತಪಸ್ಸನ್ನು ಕೈಗೊಂಡ. ಇಂದ್ರ ತನ್ನ ಪದವಿ ಎಲ್ಲಿ ವಿಶ್ವಾಮಿತ್ರನ ವಶವಾಗುತ್ತದೋ ಎಂದು ಹೆದರಿ ತಪೋಭಂಗವುಂಟು ಮಾಡಲು ಮೇನಕೆಯನ್ನು ವಿಶ್ವಾಮಿತ್ರನ ಬಳಿ ಕಳುಹಿಸಿದ. ತಪ್ಪಸ್ಸನ್ನೇ ಮರೆತ ವಿಶ್ವಾಮಿತ್ರ ಮೇನಕೆಯ ನರ್ತನಕ್ಕೆ ವಶವಾಗಿ ಅವಳ ಮೋಹಪಾಶಕ್ಕೆ ಬೀಳುತ್ತಾನೆ. ಪುರುಷನ ಸಂತೋಷಕ್ಕೂ ಹೆಣ್ಣೇ, ಪುರುಷನ ತಪೋಭಂಗಕ್ಕೂ ಹೆಣ್ಣೇ. ಅಲ್ಲದೆ ಹೆಣ್ಣನ್ನು ತಮ್ಮ ಕಾರ್ಯ ಸಾಧನೆಗೆ ಕೆಟ್ಟ ಕೆಲಸಗಳಿಗೂ

ಉಪಯೋಗಿಸುತ್ತಿದ್ದುದು ಕಂಡು ಬರುತ್ತದೆ. ನೇಮಿಸಿದ ಕೆಲಸ ಮಾಡಿದಿದ್ದರೆ ಅಂಥ ಹೆಣ್ಣಿಗೆ ಶಾಪವನ್ನು ಕೊಟ್ಟು ಭೂಲೋಕಕ್ಕೆ ಕಳುಹಿಸುವುದು ಶತಸಿದ್ಧ.

'ವೇದ, ಶಾಸ್ತ್ರ, ಆಗಮ, ಪುರಾಣಗಳೆಲ್ಲವೂ ಕೊಟ್ಟಣವ ಕುಟ್ಟಿದ ನುಚ್ಚು, ತೌಡು, ಕಾಣಿ ಭೋ' ಎನ್ನುತ್ತಾಳೆ ಅಕ್ಕಮಹಾದೇವಿ. ಹನ್ನೆರಡನೇ ಶತಮಾನದ ಕಾಲಕ್ಕೆ ವೇದ ಪುರಾಣಗಳಲ್ಲಿ ಹೀನಾಯವಾಗಿ ಹೆಣ್ಣನ್ನು ಚಿತ್ರಿಸಿದ್ದರಿಂದ ಮಹಿಳೆಯರು ವೇದ ಪುರಾಣಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ಹೊಂದಿದ್ದರೆಂಬುದಕ್ಕೆ ಅಕ್ಕಮಹಾದೇವಿಯ ಈ ವಚನ ನಿದರ್ಶನವಾಗಿದೆ. ಏಕೆಂದರೆ ವೇದ, ಕಾವ್ಯ, ಶಾಸ್ತ್ರ, ಪುರಾಣಗಳನ್ನೆಲ್ಲ ಬರೆದವರು ಪುರುಷರು. ಸ್ತ್ರೀಯರನ್ನು ತಮ್ಮ ಸರಿಸಮನಾಗಿ ಚಿತ್ರಿಸುವುದು ಅವಮಾನಕರವೆಂಬಂತೆ ಕಂಡಿರಬಹುದು. ಮಾತ್ರವಲ್ಲ ಪುರುಷರ ಸಾಮ್ರಾಜ್ಯದಲ್ಲಿ ಸ್ತ್ರೀಯರು ವಿಜೃಂಭಿಸುವುದು ಇಷ್ಟವಿಲ್ಲದೆಯಿರಬಹುದು. ಹೆಣ್ಣು ದುಃಖ ಪರಂಪರೆಯಲ್ಲಿಯೇ ಬದುಕುವ ಹಾಗೆ ಮಹಾಕಾವ್ಯಗಳಲ್ಲಿಯೂ ಚಿತ್ರಿಸಲಾಗಿದೆ.

ಪೌರಾಣಿಕ ಪಾತ್ರಗಳ ಮೂಲಕ ಹೆಣ್ಣಿನ ಸಾಮಾಜಿಕ ಚಿತ್ರಣವನ್ನು ಅರಿಯುವ ಪ್ರಯತ್ನ ಮಾಡಿದ್ದರ ಫಲಿತಾಂಶ ರಾಮಾಯಣ, ಮಹಾಭಾರತ ಮತ್ತು ಪುರಾಣ ಪಾತ್ರಗಳು ಜನತೆಯ ಮೇಲೆ ಗಾಢವಾದ ಪ್ರಭಾವವನ್ನು ಬೀರಿದ್ದು ಮಹಾಕಾವ್ಯಗಳೆಂದರೆ ಭಾರತೀಯ ಜೀವನ ಸೂತ್ರಗಳು. ಅವು ರಚಿತವಾದ ಕಾಲದ ಜನಜೀವನ, ಸಾಂಸ್ಕೃತಿಕ ಸಂಗತಿಗಳು, ಸಾಯೋಜಿಕ ಸಂದರ್ಭಗಳು, ರಾಜಕೀಯ ವ್ಯವಸ್ಥೆಗಳು ಮತ್ತು ಜನರು ನಂಬಿದ ಜೀವನ ಮೌಲ್ಯಗಳನ್ನು ಅರಿಯುವುದಾಗಿದೆ. ಇಂಥ ಮಹತ್ವವೂ, ಅದ್ವಿತೀಯವೂ ಆದ ಭಾರತೀಯ ಸಂಸ್ಕೃತಿಯ ಸಾರವನ್ನು ಹೇಳುವ ಕೃತಿಗಳಲ್ಲಿಯೂ ಸ್ತ್ರೀ ಸಮಾಜ ಅಪಮೌಲ್ಯಕ್ಕೊಳಗಾಗಿರುವುದನ್ನು ಕೆಲವು ಮುಖ್ಯ ಪಾತ್ರಗಳನ್ನು ವಿಶ್ಲೇಷಿಸುವುದರ ಮೂಲಕ ಚಿಂತಿಸಲಾಗಿದೆ.

## ಅಡಿ ಟಿಪ್ಪಣಿಗಳು:

೧. ಡಾ|| ಎಚ್.ತಿಪ್ಪೇರುದ್ರಸ್ವಾಮಿ - ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪುಟ - ೨೫

೨. ಡಾ|| ಹಾಲತಿ ಸೋಮಶೇಖರ್ - ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ. ಪುಟ - ೨೯

೩. ಚ.ನ.ಶಂಕರ್‌ರಾವ್- ಭಾರತೀಯ ಸಮಾಜ - ಪುಟ - ೧೭೨

೪. ಡಾ|| ಹಾಲತಿ ಸೋಮಶೇಖರ್ - ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ. ಪುಟ - ೩೭

೫. ಅದೇ.

೬. ಚ.ನ.ಶಂಕರ್‌ರಾವ್- ಭಾರತೀಯ ಸಮಾಜ - ಪುಟ - ೧೭೩

೭. ಸಂಪಾದಕರು ಕೆ.ವಿ.ಪುಟ್ಟಪ್ಪ- ಯುಗಯಾತ್ರೀ ಭಾರತೀಯ ಸಂಸ್ಕೃತಿ. ಪುಟ - ೧೯೮

೮. ಡಾ|| ಹಾಲತಿ ಸೋಮಶೇಖರ್ - ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ. ಪುಟ - ೫೧



# ಅಧ್ಯಾಯ: ೪

# ಭಾರತದ ಮಹಿಳೆಯರ ಸಮಸ್ಯೆಗಳು

ಮಹಿಳೆಯರ ಬದುಕಿನ ಅಸ್ತಿತ್ವದ ಎಲ್ಲ ನೆಲೆಗಳಲ್ಲಿಯೂ ಸಾಮಾಜಿಕ ಚೌಕಟ್ಟಿನ ಬಂಧನ ಅವಳನ್ನು ಸುತ್ತುವರಿದಿದೆ. ಸ್ತ್ರೀಯರನ್ನು ತುಳಿಯುವ ದಮನ ಮಾಡುವ ಶೋಷಕ ಪ್ರವೃತ್ತಿ ಪುರುಷರಲ್ಲಿ ಪರಂಪರಾಗತವಾಗಿ ಬೇರೂರಿದೆ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ತುಂಬಿರುವ ಇಂಥ ನೆಲೆಗಟ್ಟಿನಲ್ಲಿ ಮಹಿಳೆಯರು ಪುರುಷರೊಂದಿಗೆ ಸಮಾನ ಸ್ಥಾನಮಾನವನ್ನು ಹೊಂದಿಲ್ಲ. ಅದಕ್ಕಿಂತ ಘೋರವಾಗಿ ದಾರುಣ ದುಃಖವನ್ನು, ಹೊರಬರಲಾರದ ಸೆರೆವಾಸದ ಕಟ್ಟುನಿಟ್ಟನ್ನು ಒಪ್ಪಿಕೊಳ್ಳಬೇಕಾಗಿದೆ. ''ಹುಟ್ಟುವ ಮುಂಚಿನಿಂದಲೂ, 'ಹೆಣ್ಣು ಹಡಿಯಲು ಬ್ಯಾಡ, ಹೆರವರಿಗೆ ಕೊಡಬ್ಯಾಡ' ಎಂಬ ಸೂಚನೆ ಅಥವಾ ಎಚ್ಚರಿಕೆಯೊಂದಿಗೆ ಭೂಮಿಗೆ ಆಗಮಿಸುವ ಸ್ತ್ರೀ ಎಂಬ ಮಗುವಿಗೆ ಅಲ್ಲಿಂದಲೇ ಅಸ್ತಿತ್ವದ ಪ್ರಶ್ನೆ ಉದ್ಭವಿಸುತ್ತದೆ''[೧].

ಇಂಥ ಪರಿಸ್ಥಿತಿ ಕೇವಲ ಭಾರತದಲ್ಲಿ ಮಾತ್ರವಲ್ಲ ಪ್ರಪಂಚದ ನಾನಾ ಭಾಗಗಳಲ್ಲಿವೆ. ಸ್ತ್ರೀ ವಿರೋಧಿ ಪ್ರವೃತ್ತಿಗಳಿಗೆ ಒಂದು ಬಗೆಯ ಸಾರ್ವತ್ರಿಕತೆ ಇದೆ. ಆಧುನಿಕತೆಯ ತುತ್ತತುದಿಯಲ್ಲಿರುವ ಸಮಾಜಗಳಲ್ಲಿರುವವರೂ ಸಹ ಲಿಂಗಸಂಬಂಧಿ ಪೂರ್ವಗ್ರಹ ಪೀಡನೆ, ದೌರ್ಜನ್ಯ, ಕಿರುಕುಳಗಳಿಗೆ ಬಲಿಯಾಗುತ್ತಿರುವುದು ನಿರ್ವಿವಾದ. ಬಾಲ್ಯ ವಿವಾಹ, ಸತಿ ಪದ್ಧತಿ ಮುಂತಾದವು ಇಂದಿಗೂ ಸಂಪೂರ್ಣ ಮರೆಯಾಗಿಲ್ಲ. ಬುದ್ಧಿವಂತ, ವಿದ್ಯಾವಂತರೂ ಕೂಡ ಇಂದಿಗೂ ಇವುಗಳನ್ನು ಆಚರಿಸುತ್ತಾರೆ. ಇವುಗಳಲ್ಲದೆ ಜೀವಂತ ದಹನದಂತಹ ಹಲವಾರು ಸಮಸ್ಯೆಗಳು ಹೆಣ್ಣು ಮಕ್ಕಳನ್ನು ಕಾಡುತ್ತಿವೆ. ಇವುಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತುತ ಪಡಿಸುವೆನು.

## ಅ) ಸತಿ ಪದ್ಧತಿ:

ಭಾರತದಲ್ಲಿ ಮಹಿಳಾ ಚಳುವಳಿಯ ಹುಟ್ಟಿಗೆ ಕಾರಣೀಭೂತವಾಗಿ ನಿಂತಿರುವ ವಿಷಯಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಸತಿ ಪದ್ಧತಿ. ಹೆಣ್ಣಿಗೆ ವಿವಾಹವೇ ಮುಖ್ಯವೆನ್ನುವ ನಂಬಿಕೆಯ ಹಿನ್ನೆಲೆಯಲ್ಲಿ ಸರಣಿಯಂತೆ ಆರಂಭಗೊಳ್ಳುವ ಬಾಲ್ಯವಿವಾಹ, ವರದಕ್ಷಿಣೆ ಇತ್ಯಾದಿ ಸಮಸ್ಯೆಗಳನ್ನೆಲ್ಲ ಹಾದು ಅಂತಿಮವಾಗಿ ಸತೀದಹನದಲ್ಲಿ ಪರ್ಯವಸನಗೊಳ್ಳುತ್ತದೆ.

ಎಲ್ಲರಿಗೂ ತಿಳಿದಿರುವ ಹಾಗೆ 'ಸತಿ ಪದ್ಧತಿ' ಎಂದರೆ ತನ್ನ ಗಂಡ ತೀರಿಕೊಂಡಾಗ, ಚಿತೆಯನ್ನು ಪ್ರವೇಶಿಸಿ ಆತ್ಮಾಹುತಿಗೊಳ್ಳುವುದು.

೧೯ನೇ ಶತಮಾನದ ಆದಿಭಾಗದಲ್ಲಿ ಒಮ್ಮೆಲೇ ಚರ್ಚೆಯ ಕೇಂದ್ರವಾದ ಈ ಪದ್ಧತಿಯು ಆ ಪೂರ್ವದ ಇತಿಹಾಸವನ್ನು ಸಾಕಷ್ಟು ಹೊಂದಿದ್ದಾಗಿದೆ. ಹೆಚ್ಚು ಕಡಿಮೆ ಭಾರತದಾದ್ಯಂತ ಕಂಡು ಬರುವ ಈ ಪದ್ಧತಿಯು ಸಹಗಮನ, ಅನುಮರಣ, ಸಹಮರಣ ಇತ್ಯಾದಿ ಹೆಸರುಗಳಿಂದ ದಾಖಲುಗೊಂಡಿದೆ. ''ಈ ಪದ್ಧತಿಯನ್ನು ಅನುಸರಿಸಿ ಸತ್ತವರ ನೆನಪಿನಲ್ಲಿ ಹಲವಾರು ದೇವಸ್ಥಾನಗಳು, ಮಾಸ್ತಿಕಲ್ಲುಗಳು ತಲೆ ಎತ್ತಿ ನಿಂತಿವೆ. ಇಂತಹ ಘಟನೆಗಳನ್ನು ಪ್ರತ್ಯಕ ಕಂಡವರ ವರದಿಗಳು ಇತಿಹಾಸದ ಪುಟಗಳಲ್ಲಿ ವರ್ಣಿತವಾಗಿವೆ. ಇಂತಹ ಪ್ರತ್ಯಕ್ಷದರ್ಶಿಗಳಲ್ಲಿ ರಾಜಾರಾಂ ಮೋಹನ್‌ರಾಯ್ ಈ ಬಗ್ಗೆ ಬಹಿರಂಗವಾಗಿ ಪ್ರಸ್ತಾಪಿಸಿ ಖಂಡಿಸಿದವರಲ್ಲಿ ಮೊದಲಿಗರು'' [೨]. ಹಾಗೆಂದು ಸಮಾಜದಲ್ಲಿ ಸಂಪೂರ್ಣ ನಿವಾರಣೆ ಸಾಧ್ಯವಾಗಲಿಲ್ಲ.

ಸ್ತ್ರೀ ಪಾವಿತ್ರ್ಯವನ್ನು ಬಹುಮುಖ್ಯ ಮೌಲ್ಯವಾಗಿ ರೂಪಿಸಿಕೊಂಡ ಸನಾತನ ಧರ್ಮವು ಪಾವಿತ್ರ್ಯ ಸಂರಕ್ಷಣೆಯ ವಿವಿಧ ದಾರಿಗಳಾಗಿಯೇ ಬಾಲ್ಯವಿವಾಹ, ವಿಧವಾಚರಣೆ ಇತ್ಯಾದಿ ಕಾರ್ಯಕ್ರಮಗಳನ್ನು ಕಾಲದಿಂದ ಕಾಲಕ್ಕೆ ಕಡ್ಡಾಯಗೊಳಿಸಲಾಯಿತು. ಅದರ ಪ್ರಕಾರ ಸುಮಾರು ಕ್ರಿ.ಶ. ೫-೬ನೇ ಶತಮಾನದ ನಂತರವೇ ಸತೀ ಪದ್ಧತಿಯು ಹೆಚ್ಚಾಯಿತು. ನಂತರದ ದಿನಗಳಲ್ಲಿ ಅಧಃಪತನಕ್ಕಿಳಿಯುತ್ತ ಹೋದ ಸ್ತ್ರೀಯ ಬದುಕು, ಅವಳ ಮೇಲೆ ನಿರಂತರವಾಗಿ ಪರಿಣಾಮ ಬೀರಿದ ಅನಿಷ್ಟ ಆಚರಣೆಗಳು ಹದಿನೆಂಟನೇ ಶತಮಾನದ ಹೊತ್ತಿಗೆ ಸತಿಪದ್ಧತಿಯನ್ನು ಹಿಂದೂ ಸಮಾಜದ ಶ್ರೇಷ್ಠತೆಯ ಕುರುಹಾಗಿ ಹಿಂದೂ ಸ್ತ್ರೀಯ ಪಾತಿವ್ರತ್ಯದ ಮೌಲ್ಯವಾಗಿ ಪ್ರತಿಷ್ಠಾಪಿಸಿತು. ಪತಿನಿಷ್ಠೆಯ ಸಂಕೇತವಾದಂತೆಯೇ ರಾಜನಿಷ್ಠೆಯ ಸಂಕೇತವಾಗಿಯೂ ಹಾಗೂ ಯುದ್ಧದಂತಹ ಕೃತ್ಯಗಳಿಂದ ಹೆಚ್ಚಾಗುವ ವೈಧವ್ಯವನ್ನು ನಿವಾರಿಸಿಕೊಳ್ಳುವ ಸಾಧ್ಯತೆಗಳು ಇದರಲ್ಲಿ ಕಂಡು ಬಂದವು.

''ಲಾರ್ಡ್ ವಿಲಿಯಂ ಬೆಂಟಿಂಕ್, ರಾಜರಾಮ್ ಮೋಹನ್ ರಾಯ್ ಇದರ ವಿರುದ್ಧ ಪ್ರತಿಭಟಿಸುತ್ತಲೇ ೧೮೨೯ ರಂದು ಆರಂಭಗೊಳ್ಳುವ ಸತಿ ಪ್ರಸ್ತಾಪವು ೧೯೮೭ರ ರೂಪಾಕನ್ವರ್ ಎಂಬ ಸಮಾಕಾಲೀನ ದಾಖಲೆಯನ್ನು ಕಾಣುವಂತಾಯಿತು'' [೩]. ಬ್ರಿಟೀಷ್ ಆಡಳಿತದ ಒಳಗೆ ಈ ಪದ್ಧತಿಯನ್ನು ನಿಷೇಧಿಸಬೇಕೆಂಬ ಒತ್ತಡ ಹೆಚ್ಚುತ್ತಾ ಹೋದ ಹೊತ್ತಿಗೆ

ಬಂಗಾಳದ ಶ್ರೀಮಂತ ಕುಟುಂಬದ ಆಧುನಿಕ ಶಿಕ್ಷಣ ಪಡೆದ ರಾಜಾರಾಮ್ ಮೋಹನ್‌ರಾಯ್ ತೀವ್ರವಾದ ರೀತಿಯಲ್ಲಿ ಈ ಕುರಿತು ಬಹಿರಂಗವಾಗಿ ಮಾತನಾಡತೊಡಗಿದರು. ಸ್ವತಃ ಸಹೋದರನ ಪತ್ನಿ ಸತಿಗೆ ಬಲಿಯಾದುದನ್ನು ಕಂಡು ಅದನ್ನು ತಡೆಯಲೆತ್ನಿಸಿದ್ದ ರಾಯ್ ಇದರ ಬಗ್ಗೆ ವ್ಯವಸ್ಥಿತ ಹೋರಾಟ ಕೈಗೊಂಡರು. ಸರ್ಕಾರಕ್ಕೆ ಸತೀ ನಿಷೇಧಕ್ಕೆ ಕಾನೂನು ಕ್ರಮ ಕೈಗೊಳ್ಳಲು ಒತ್ತಾಯಿಸತೊಡಗಿದರು. ಹೀಗೆ ಭಾರತೀಯರೊಳಗಿಂದಲೇ ಈ ದೇಶದ ಧರ್ಮ, ಸಂಸ್ಕೃತಿ, ಭಾಷೆಗಳನ್ನು ಬಲ್ಲ ವಿದ್ವಾಂಸರೊಟ್ಟಿಗೆ ಸತೀ ನಿಷೇಧದ ಬಗ್ಗೆ ಬಹಿರಂಗವಾಗಿ ಮಾತನಾಡತೊಡಗಿದ ದೇಶೀ ಸಮುದಾಯ ಒಂದು ಹುಟ್ಟಿತು.

ರಾಜಾರಾಮ್ ಮೋಹನ್ ರಾಯ್ ಸತೀ ಪದ್ಧತಿಯ ವಿರುದ್ಧ ಮಾತನಾಡುವ ಹೊತ್ತಿಗೆ ಕಲ್ಕತ್ತಾದ ಸುತ್ತಮುತ್ತ ಸತೀ ಪ್ರಕರಣ ಹೆಚ್ಚಾಯಿತು. ಈ ನಡುವೆಯೆ ೧೮೨೮ರಲ್ಲಿ ಗೌರ್ನರ್ ಜನರಲ್ ಆಗಿ ಬಂದ ವಿಲಿಯಂ ಬೆಂಟಿಂಕ್ ೧೮೨೯ರ ಬೆಂಗಾಲ್ ರೆಗ್ಯುಲೇಷನ್ ಕಾಯ್ದೆ ಮೂಲಕ ಸತೀ ಪದ್ಧತಿಯ ಆಚರಣೆ ದಂಡನಾರ್ಹ ಅಪರಾಧವೆಂದು ಜಾರಿಗೆ ತಂದ.

ಬಂಗಾಳದಲ್ಲಿ ಮುಖ್ಯವಾಗಿ ಆರಂಭಗೊಂಡ ಸತೀ ನಿಷೇಧ ಹೋರಾಟವು ನಿಷೇಧ ಕಾಯ್ದೆಯ ಜಾರಿಯೊಂದಿಗೆ ಸ್ತ್ರೀ ಪರವಾದ ಹೆಜ್ಜೆಯನ್ನು ಇಟ್ಟಿತಾದರೂ, ಭಾರತೀಯ ಸಮಾಜವೇನೂ ಅದಕ್ಕೆ ಸಂಪೂರ್ಣ ಬದ್ಧವಾಗಿ ನಿಲ್ಲಲಿಲ್ಲ. ಸಮಾಜದಲ್ಲಿ ಇದ್ದ ಅಂಧವಿಶ್ವಾಸ, ಪುರೋಹಿತಶಾಹಿ ವರ್ಗ, ಪಿತೃಪ್ರಧಾನ ಗುಣಗಳಿಂದ ಸತೀ ಪ್ರಕರಣಗಳು ಮುಂದುವರಿದುಕೊಂಡೇ ಬಂದಿತು. ಇದಕ್ಕೆ ಉದಾಹರಣೆಯಾಗಿ ರೂಪಕನ್ವರ್ ಸತೀ ಪ್ರಕರಣ ಘಟಿಸಿದ ದಿಯೋರಾಲಾ ಆಧುನಿಕತೆಯ ಗಂಧಗಾಳಿ ಇಲ್ಲದ ಕುಗ್ರಾಮವಲ್ಲ. ಜಿಲ್ಲಾ ಕೇಂದ್ರಕ್ಕೆ ಸಾಕಷ್ಟು ಹತ್ತಿರದಲ್ಲಿದ್ದು ಹೈಸ್ಕೂಲ್, ಆಸ್ಪತ್ರೆ, ಇತ್ಯಾದಿಗಳನ್ನೆಲ್ಲ ಹೊಂದಿರುವ ಗ್ರಾಮ. ಸಾಕಷ್ಟು ಶ್ರೀಮಂತ ಶಿಕ್ಷಿತ ಕುಟುಂಬವೇ. ಸ್ವತಃ ರೂಪಕನ್ವರ್ ಕೂಡ ಶಾಲೆಯನ್ನು ಪೂರೈಸಿದ ನಗರದ ಹುಡುಗಿಯಾಗಿದ್ದಳು. ಹಾಗಿದ್ದರೂ ಅಲ್ಲಿ ಸತೀ ಘಟಿಸಿತು ಎಂಬ ವಿಚಾರ ಹಾಗೂ ಅನಂತರದಲ್ಲಿ ತನ್ನ ಆಧುನಿಕತೆ, ಮಾನವೀಯತೆ ಮರೆತು, ಸಮಾಜದ ಒಂದು ವರ್ಗ ಅದನ್ನು ಸಮರ್ಥಿಸಿಕೊಂಡ ವಿಚಾರಗಳು ಪಿತೃಪ್ರಧಾನ ರಾಜಕಾರಣದ ಅಂಶವೆಂದು ತಿಳಿಯಬಹುದು.

ಸೆಪ್ಟಂಬರ್ ೮, ೧೯೮೭ ರಂದು ನಡೆದ ಸತೀ ಪ್ರಕರಣದ ಬಗೆಗಿನ ಎಫ್.ಐ.ಆರ್.

ಪ್ರಕಾರ, ಯಾರೊಬ್ಬರ ಮೇಲೂ ಕಾನೂನು ಕ್ರಮ ಕೈಗೊಳ್ಳಲಿಲ್ಲ. ವಿಷಯ ತಿಳಿದ ಮಹಿಳಾ ಚಳುವಳಿಗಾರರ ಗುಂಪು ರಾಜ್ಯ ಸರ್ಕಾರದ ಮೇಲೆ ಒತ್ತಡ ತಂದಾಗಲೂ ಮೊದಲಿಗೆ ಅದೊಂದು ಧಾರ್ಮಿಕ ವಿಷಯವೆಂದು ನಿರಾಕರಿಸಲಾಯಿತು. ಒತ್ತಡ ತೀವ್ರವಾದಾಗ ಸೆಪ್ಟಂಬರ್ ೯ ರಂದು ಚಿತೆಗೆ ಬೆಂಕಿ ಇಟ್ಟ ರೂಪಳ ಮೈದುನನಾದ ಪುಷ್ಪೇಂದ್ರನನ್ನು ಬಂಧಿಸಲಾಯಿತು. ರೂಪ ಕನ್ವರಳ ಮಾವ ಹಾಗೂ ಸತಿಯನ್ನು ನಡೆಸಿಕೊಟ್ಟ ಪುರೋಹಿತನನ್ನು ಬಂಧಿಸಿ ಜಾಮಿನಿನ ಮೇಲೆ ಬಿಡುಗಡೆಗೊಳಿಸಲಾಯಿತು. ಅದರ ಪ್ರಕಾರ ಸತೀ ಪದ್ಧತಿ ಆಚರಿಸುವುದಲ್ಲದೇ, ಸಾರ್ವಜನಿಕವಾಗಿ ಅದನ್ನು ವೈಭವೀಕರಿಸುವ ಮೆರವಣಿಗೆ, ಹಣ ಸಂಗ್ರಹಣೆ, ಟ್ರಸ್ಟ್ ನಿರ್ಮಾಣ ಇತ್ಯಾದಿಗಳನ್ನು ನಿಷೇಧಿಸಲಾಯಿತು.

ಇಷ್ಟಾದರೂ ೨೦೦೩ ರಲ್ಲಿ ಮಧ್ಯಪ್ರದೇಶ ಹಾಗೂ ರಾಜಸ್ಥಾನದಲ್ಲಿ ಮರುಕಳಿಸಿದ ಸತೀ ಪ್ರಕರಣಗಳು ರೂಪಾಕನ್ವರ್ ಪ್ರಕರಣ ಒಂದು ಪ್ರತ್ಯೇಕಿತ ಘಟನೆಯಾಗಿಲ್ಲ ಎಂಬುದಕ್ಕೆ ಸಾಕ್ಷಿಯಾಗಿದೆ. ಹಲವಾರು ಪ್ರತಿಭಟನೆಗಳ ನಂತರ ರೂಪಾಕನ್ವರ್ ಪ್ರಕರಣದ ವಾದ - ವಿವಾದದಲ್ಲಿ ಬಾಂಬೆ ಹೈಕೋರ್ಟ್‌ನ ಜಸ್ಟೀಸ್ ಸುಜಾತ ಮನೋಹರ 'ಒಂದು ವೇಳೆ ಆಕೆ ಸ್ವಯಂ ಪ್ರೇರಣೆಯಿಂದ ಚಿತೆ ಏರಿದ್ದರೂ ಅದು ಆತ್ಮಹತ್ಯೆಯಾಗಲಾರದು, ಏಕೆಂದರೆ ಗಂಡ ಸತ್ತ ಆ ಕ್ಷಣದಲ್ಲಿ ನಮ್ಮ ಸಮಾಜದ ಹೆಣ್ಣು ದಿಗ್ಭ್ರಮೆ ಹಾಗೂ ಮಾನಸಿಕ ಕ್ಷೋಭೆಗೆ ಒಳಗಾಗಿರುತ್ತಾಳೆ. ಅಂತಹ ಹೊತ್ತಿನಲ್ಲಿ ಆಕೆ ಆ ನಿರ್ಧಾರ ತೆಗೆದುಕೊಳ್ಳುವುದು ಆಶ್ಚರ್ಯದ ಸಂಗತಿಯೇನಲ್ಲ ಎಂದರು.

೧೮೧೦ರ ಸುಮಾರಿಗೆ ಚರ್ಚೆಯನ್ನು ಆರಂಭಿಸಿದ ಸತೀ ಪ್ರಸಂಗವು ಈ ಹೊತ್ತಿಗೂ ತನ್ನನ್ನು ಚಾಲ್ತಿಯಲ್ಲಿಟ್ಟುಕೊಂಡಿರುವ ವಿಚಾರ ಗಮನಿಸಿದರೆ ಇದು ಮಹಿಳಾ ಚಳುವಳಿಗಳ ಉದ್ದಕ್ಕೂ ಹರಡಿರುವ ವಿಷಯವಾಗಿರುವಂತೆ ಗೋಚರಿಸುತ್ತದೆ. ಈ ಬಗ್ಗೆ ಉದ್ದಕ್ಕೂ ಸಾಂಪ್ರದಾಯವಾದಿಗಳ ನಿಲುವು ಅಚಲವಾಗಿರುವಂತೆ ಸರ್ಕಾರಗಳ ಕಾರ್ಯವೈಖರಿ ಅನುಮಾನಾಸ್ಪದವಾಗಿರುವಂತೆ ಕಂಡು ಬರುತ್ತದೆ. ಆಗ ರಾಜಾರಾಂ ಮೋಹನ್‌ರಾಯ್ ಈಗ ಸ್ವಾಮಿ ಅಗ್ನಿವೇಷ. ಈ ವಿಚಾರದಲ್ಲಿ ಆಧುನೀಕರಣದ ಅಂಶವಾದ ಸಂಪರ್ಕ ಮಾಧ್ಯಮವನ್ನು ಅತ್ಯಂತ ಯಶಸ್ವಿಯಾಗಿ ಸಂಪ್ರದಾಯವೇ ಬಳಸಿಕೊಂಡಂತಿದೆ.

ರಾಜಾರಾಂ ಮೋಹನ್‌ರಾಯ್ ಸತೀ ವಿರುದ್ಧ ದನಿ ಎತ್ತಿದ ಹೊತ್ತಿನಲ್ಲಿ ಮಹಿಳಾ ಸಂಘಟನೆಯ ಅಸ್ತಿತ್ವವೇ ಭಾರತದಲ್ಲಿರಲಿಲ್ಲ. ವ್ಯಕ್ತಿಗತವಾಗಿ ಮಹಿಳೆಗೆ ಬಾಹ್ಯ

ಪ್ರಪಂಚದೊಂದಿಗಿನ ಸಂಪರ್ಕವಾಗಲಿ, ತನ್ನ ಪ್ರತಿಕ್ರಿಯೆ ನೀಡುವ ಸಾಧ್ಯತೆಯಾಗಲಿ ಇರಲೇ ಇಲ್ಲ. ಇಪ್ಪತ್ತೊಂದನೆಯ ಶತಮಾನದ ಜಾಗತೀಕರಣದಲ್ಲಿ ನೆಲೆಯೂರಿರುವ ಪ್ರಜ್ಞಾವಂತ ಮಹಿಳೆಯರು ಇಂತಹ ಅನಿಷ್ಟ ಪದ್ಧತಿಗಳನ್ನು ಸಂಪೂರ್ಣವಾಗಿ ನಿರ್ನಾಮ ಮಾಡಬೇಕು.

## ಆ) ಶಿಶುಹತ್ಯೆ:

ಮಹಿಳೆಯರ ದಾಸ್ಯ ಜೀವನ ಹುಟ್ಟುವ ಮುಂಚೆಯೇ ಪ್ರಾರಂಭವಾಗುತ್ತದೆ. ಗಂಡಿನ ಕಾಮನೆಗಳು ಕಾಮತೃಪ್ತಿಗಳು ಹೆಣ್ಣನ್ನೆ ಅವಲಂಬಿಸಿದ್ದರೂ ಸ್ತ್ರೀ ಮಾತ್ರ ಕೇವಲ ಪೂರೈಕೆ ವಸ್ತುವಾಗಿ ಬಳಕೆಯಾಗುತ್ತಾಳೆ. ಪರಿಣಾಮವಾಗಿ ಮತ್ತೊಂದು ಹೆಣ್ಣನ್ನು ಭೂಮಿಗೆ ತರುವುದು ಗಂಡಿಗೂ ಬೇಡ, ತನ್ನ ಅವಸ್ಥೆ ಮತ್ತೆ ಪುನರಾವರ್ತನೆಯಾಗದಿರಲೆಂದು ಸ್ತ್ರೀ ಕೂಡ ಅದನ್ನು ವಿರೋಧಿಸುವ ಪರಿಸ್ಥಿತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರಬಹುದು.

ಹೆಣ್ಣು ಮಗುವನ್ನು ವೇದಗಳ ಕಾಲದಿಂದಲೂ ದ್ವೇಷಿಸುತ್ತಲೇ ಬಂದಿರುವುದನ್ನು ಕಾಣಬಹುದು. ''ಬೈಬಲ್‌ನಲ್ಲಿ ಹೆರಾಡನು ಶಿಶುಗಳ ಹತ್ಯಾಕಾಂಡವನ್ನು ಮಾಡಿದಂತೆ, ಕಂಸನು ಸ್ವಂತ ತಂಗಿಯ ಶಿಶುಗಳನ್ನೇ ಕ್ರೂರವಾಗಿ ಹತ್ಯೆ ಮಾಡಿದಂತೆ, ಅದೆಷ್ಟೋ ಪುರುಷರು ಹುಟ್ಟಿನಿಂದಲೇ ಸ್ತ್ರೀನಾಶವನ್ನು ಅವ್ಯಾಹತವಾಗಿ ಮಾಡುತ್ತ ಬಂದಿದ್ದಾರೆ''. ಲಾರ್ಡ್ ವೆಲ್ಲೆಸ್ಲಿ ೧೮೦೨ರಲ್ಲಿ ಶಿಶುಹತ್ಯೆಯನ್ನು ನಿಷೇಧಿಸಿ ಕಾನೂನನ್ನು ಹೊರಡಿಸಿದ್ದ. ಆದರೆ ಯಾವುದೇ ಪ್ರಯೋಜನವಾಗಲಿಲ್ಲ. ಬಂಗಾಳದಲ್ಲಿ ಹರಕೆ ಹೊತ್ತು ತಾಯಂದಿರು ಹೆಣ್ಣು ಮಗುವನ್ನು ನೀರಿನಲ್ಲಿ ಮುಳುಗಿಸುತ್ತಿದ್ದರಂತೆ. ಪಶ್ಚಿಮ ಭಾರತದಲ್ಲಿ ಹೆಣ್ಣು ಹುಟ್ಟಿದ ಕೂಡಲೇ ಕತ್ತು ಹಿಸುಕಿ ಕೊಲ್ಲುವ ರೂಢಿಯಿತ್ತು. ರಾಜಸ್ಥಾನದಲ್ಲಿ ಹೆಣ್ಣು ಶಿಶುವಿಗೆ ತಾಯಿಯ ಹಾಲು ಕುಡಿಸದಿರುವುದು, ಸ್ತನಕ್ಕೆ ವಿಷಸವರಿ ಶಿಶುಹತ್ಯೆ ಮಾಡುವುದು ಕ್ಷತ್ರಿಯರೆನಿಸಿಕೊಂಡ ರಜಪೂತರಿಗೆ ಅಭಿಮಾನದ ವಿಷಯವಾಗಿತ್ತಂತೆ. ಇಂದಿಗೂ ಹೆಣ್ಣು ಶಿಶು ಜನನವಾದರೆ ತಾತ್ಸಾರದ ಮನೋಭಾವನೆಗಳಿಂದ ಕಾಣುತ್ತಾರೆ.

ಗರ್ಭಪಾತ ಎಂದರೆ ಮಗು ಗರ್ಭದಲ್ಲಿ ತನ್ನಷ್ಟಕ್ಕೇ ಪೂರ್ಣ ಪ್ರಮಾಣದಲ್ಲಿ ಬೆಳೆಯಲು ಆಸ್ಪದ ನೀಡದೆ ಬಲವಂತವಾಗಿ ಭ್ರೂಣವನ್ನು ಹೊರತೆಗೆಯುವುದು ಎಂದು ಹೇಳಬಹುದು. ಭಾರತ ದಂಡ ಸಂಹಿತೆಯ ೩೧೨ ರಿಂದ ೩೧೮ನೇ ಪ್ರಕರಣಗಳಿಗನು ಸಾರವಾಗಿ ಇದು ಶಿಕ್ಷಾರ್ಹ ಅಪರಾಧ. ಲೈಂಗಿಕ ಅಪರಾಧಗಳಾದ ಅತ್ಯಾಚಾರ ಅಥವಾ ಮಾನಸಿಕ ಅಸ್ವಸ್ಥತೆ ಇರುವ ಹೆಣ್ಣಿನೊಡನೆ ನಡೆಸಿದ ಸಂಭೋಗದಿಂದ ಉಂಟಾದ

ಗರ್ಭವನ್ನು ಮಾನವೀಯ ದೃಷ್ಟಿಯಿಂದ ತೆಗೆಸುವುದು ಮತ್ತು ಹುಟ್ಟುವ ಮಗು ಅಂಗವಿಕಲ, ಬುದ್ಧಿಮಾಂದ್ಯ ಅಥವಾ ಕಾಯಿಲೆಗೆ ಈಡಾಗುವ ಸಂದರ್ಭಗಳಲ್ಲಿ ಗರ್ಭ ತೆಗೆಸುವುದನ್ನು ಕಾನೂನು ಬದ್ಧಗೊಳಿಸಲಾಗಿದೆ. ಆದರೂ ಹೆಣ್ಣು ಭ್ರೂಣ ಹತ್ಯೆ ಸಮಸ್ಯೆ ಈಗ ಬೃಹದಾಕಾರವಾಗಿದೆ. ಹೆಣ್ಣು ಭ್ರೂಣ ಹತ್ಯೆಗೆ ಈ ಕಾರಣಗಳನ್ನು ಕೊಡಬಹುದು.

೧. ಹಿಂದೂ ಸಮಾಜದಲ್ಲಿ ಹೆಣ್ಣನ್ನು ಎರಡನೇ ದರ್ಜೆಯಲ್ಲಿ ನೋಡುವುದು.

೨. ಹೆಣ್ಣು ಮಕ್ಕಳನ್ನು ಕಾಡುವ ವರದಕ್ಷಿಣೆ ಪದ್ಧತಿ.

೩. ಪಿತೃ ಪ್ರಧಾನ ಸಮಾಜ/ ಪುರುಷ ದಬ್ಬಾಳಿಕೆ.

೪. ಮಹಿಳೆರು ತಮಗಾದ ದುಃಸ್ಥಿತಿಯು ನಮಗೆ ಹುಟ್ಟುವ ಹೆಣ್ಣು ಮಕ್ಕಳಿಗೆ ಆಗದಿರಲೆಂದು ಬಯಸುವುದು.

ವಿಜ್ಞಾನ ಮತ್ತು ತಂತ್ರಜ್ಞಾನದ ಈ ಬೆಳವಣಿಗೆ ಮಾನವಕುಲಕ್ಕೆ ವರವಾಗುವ ಬದಲು ಸ್ತ್ರೀ ಸಮೂಹಕ್ಕೆ ಶಾಪವಾಗಿರುವುದು ವಿಪರ್ಯಾಸ. ಈ ಲಿಂಗ ನಿರ್ಧರಣಾ ಕ್ರಮ ಪ್ರಾರಂಭವಾದ ಮೇಲೆ ಸ್ತ್ರೀ ಭ್ರೂಣಹತ್ಯೆಯ ಅಂಕಿ ಅಂಶಗಳು ಗಾಬರಿ ಹುಟ್ಟಿಸುವಂತಿದೆ. ಹೆಣ್ಣು ಮಕ್ಕಳ ಪಾಲನೆ, ಪೋಷಣೆ, ಮದುವೆ ವೆಚ್ಚ, ವರದಕ್ಷಿಣೆಯ ಸಮಸ್ಯೆಗಳನ್ನು ನಿವಾರಿಸಲು ಈ ಭ್ರೂಣಹತ್ಯೆಯನ್ನು ವಿಶೇಷವಾಗಿ ಹೆಂಗಸರೇ ಮಾಡುತ್ತಾರೆ. ಇದರಿಂದ ಇಂಥ ದಂಧೆ ಮಾಡುವ ವೈದ್ಯರು ಸುಲಭ ಹಣಗಳಿಕೆ ಸಾಧನವಾಗಿ ಇದನ್ನು ಬಳಸುತ್ತಿರುವುದು ಆತಂಕದ ವಿಷಯ. ಭಾರತದಲ್ಲಿ ೧೯೭೭ ರಿಂದ ೧೯೮೩ ರವರೆಗಿನ ಅವಧಿಯಲ್ಲಿ ೭೮.೦೦೦ ಹೆಣ್ಣು ಭ್ರೂಣ ಹತ್ಯೆ ಮಾಡಿರುವ ಬಗ್ಗೆ ವರದಿಯಾಗಿದೆ. ವೃತ್ತಿಯ ಹಿರಿಮೆಯನ್ನು ಎತ್ತಿ ಹಿಡಿಯುವ ನಿಷ್ಠೆಹೊಂದಿರುವ ಪ್ರಜ್ಞಾವಂತ ವೈದ್ಯರು ಕೂಡಿ ಇಂಥ ಹೀನಾಯ ಕಾರ್ಯಕ್ಕೆ ಕೇವಲ ಹಣದಾಸೆಯಿಂದ ಮುಂದಾಗುತ್ತಾರೆ. ಗರ್ಭಿಣಿಯರು ಪರೀಕ್ಷೆಗಾಗಿ ಬಂದಾಗ ಅವರ ಅಭಿಪ್ರಾಯವನ್ನು ಉಪಾಯವಾಗಿ ಗ್ರಹಿಸಿ ಹೆಣ್ಣು ಮಗುವಿನ ಭ್ರೂಣವೆಂದು ತಿಳಿದರೆ ಗರ್ಭದ ಅಥವಾ ಭ್ರೂಣದ ನ್ಯೂನತೆಯನ್ನು ಸೂಚಿಸಿ ಭ್ರೂಣಹತ್ಯೆ ಮಾಡುವ ಮಹಿಳಾ ವೈದ್ಯರಿದ್ದಾರೆ. ಪುರುಷನ ದಬ್ಬಾಳಿಕೆಯಿಂದ ನರಳಿದ ಹೆಣ್ಣು ತನ್ನ ಮಗಳಿಗೆ ಈ ಯಾತನೆ ಬೇಡ ಎಂದು ಇಂಥದಕ್ಕೆ ಮುಂದಾಗುತ್ತಾಳೊ ಏನೊ... ಮಹಿಳೆಯರಿಗೆ ಆತ್ಮಬಲವೂ ಇರುವುದಿಲ್ಲ. ಹೀಗಾಗಿ ತನ್ನ ದೇಹದ ಮೇಲಿನ

ದುರಾಕ್ರಮಣವನ್ನು ವಿರೋಧಿಸಲಾರಳು. ಗುಜರಾತ್ ಮತ್ತು ಅಹಮದಾಬಾದ್ ರಾಜ್ಯಗಳಲ್ಲಿ ಹೆಚ್ಚು ಭ್ರೂಣಹತ್ಯೆ ಮಾಡಲಾಗುತ್ತಿದೆ.

ಹುಟ್ಟುವ ಮೊದಲೇ ಮರಣವನ್ನಪ್ಪುವ ಹೆಣ್ಣು ಭ್ರೂಣಗಳು ಒಂದೆಡೆ, ಹುಟ್ಟಿದ ಮರುಕ್ಷಣದಲ್ಲೇ ಕೊಲೆಯಾಗುವ ಹೆಣ್ಣು ಶಿಶುಗಳು ಮತ್ತೊಂದೆಡೆ, ಇದು ಭಾರತೀಯ ಸಮಾಜದ ಒಳಗೆ ನಡೆಯುತ್ತಿರುವ ಸ್ತ್ರೀ ಹಿಂಸೆಯ ಎರಡು ಮುಖಗಳು. ಗಂಡು ಮಗುವಿನಿಂದ ಮೋಕ್ಷ ಪ್ರಾಪ್ತಿ ಎಂಬ ನಂಬಿಕೆಯಿಂದ ಹೆಣ್ಣನ್ನು ಕೇವಲ ಭೋಗವಸ್ತುವಿನಂತೆ ಬಳಸಿದ ಪುರುಷ ಪ್ರಧಾನ ವ್ಯವಸ್ಥೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ದೇಶದಾದ್ಯಂತ ವಿವಿಧ ರಾಜ್ಯಗಳಲ್ಲಿ, ವಿವಿಧ ಪ್ರಮಾಣಗಳಲ್ಲಿ ನಡೆಯುತ್ತಿರುವ ಹೆಣ್ಣು ಶಿಶು ಹತ್ಯೆ, ಗಂಡು ಸಂತಾನದ ಹುಚ್ಚು ವ್ಯಾಮೋಹ ಪರಾಕಾಷ್ಠೆಯನ್ನು ತಲುಪಿರುವುದರ ಸಂಕೇತ. ವಿವಾಹ, ಬಸಿರು, ಬಾಣಂತನ, ಗಂಡಿನ ಮನೆಯವರ ಬೇಡಿಕೆಗಳು ಮುಂತಾದವುಗಳ ಮೇಲೆ ಹಣವನ್ನು ವ್ಯಯಮಾಡುತ್ತಲೇ ಇರಬೇಕಾಗುತ್ತದೆ ಎಂಬ ಕಾರಣಗಳನ್ನು ಮುಂದಿಟ್ಟುಕೊಂಡು ಹೆಣ್ಣು ಶಿಶು ಹತ್ಯೆಯಂಥ ಬರ್ಬರ ಕೃತ್ಯವನ್ನೆಸಗುತ್ತಾರೆ. ''ನವಜಾತ ಶಿಶುವಿಗೆ ವಿಷಪೂರಿತ ಆಹಾರವನ್ನುಣಿಸುವುದು, ಕತ್ತು ಹಿಸುಕುವುದು ಅಥವಾ ಉಸಿರುಕಟ್ಟಿಸುವುದು ಇವು ಸಾಮಾನ್ಯವಾಗಿ ಬಳಸುವ ಶಿಶು ಹತ್ಯಾ ವಿಧಾನಗಳು, ಹೆಣ್ಣು ಶಿಶು ಹತ್ಯೆಯ ಬಗ್ಗೆ ನಿಖರವಾದ ಅಂಕಿ ಅಂಶಗಳನ್ನು ಒದಗಿಸುವುದು ಕಷ್ಟಕರ ಪ್ರಯತ್ನ, ಏಕೆಂದರೆ ಇದು ಗೋಪ್ಯವಾಗಿ ನಡೆಯುವಂತ ಕೃತ್ಯ. ತಮಿಳುನಾಡಿನ ಸೇಲಂ ಜಿಲ್ಲೆಯಲ್ಲಿ ಶೇಕಡ ೫೧ ಕುಟುಂಬಗಳಲ್ಲಿ ಹೆಣ್ಣು ಶಿಶುಹತ್ಯೆ ನಡೆಯುತ್ತಿದೆ ಎಂಬ ವರದಿಯಿದ್ದು, ಕಾನೂನು, ಆರಕ್ಷಕರು, ಆಡಳಿತ ಅಧಿಕಾರಿಗಳು, ವಿಷಯವನ್ನು ತಿಳಿದು, ಇದೊಂದು ಖಾಸಗಿ, ಕೌಟುಂಬಿಕ ವ್ಯವಹಾರವೇ ಹೊರತು ಸಾರ್ವಜನಿಕ ವಿಷಯವಲ್ಲ ಎಂಬುದು ಇವರ ಧೋರಣೆ''[೫]. ಹೆಣ್ಣು ಭ್ರೂಣ ಹತ್ಯೆ, ಶಿಶುಹತ್ಯೆ ಇವೆರಡೂ ಕೂಡ ಅಮಾನವೀಯ ಕೃತ್ಯಗಳು. ಈ ಪಿಡುಗನ್ನು ನಿವಾರಿಸಲು ಸ್ತ್ರೀಯರು ಎಚ್ಚೆತ್ತುಕೊಳ್ಳಬೇಕು. ಹೆಣ್ಣು ಮಗುವನ್ನು ಹಡೆಯುವುದು ತಪ್ಪಲ್ಲ. ಈ ಜೈವಿಕ ನಿಯಮವನ್ನು ಬದಲಿಸುವ ಸಾಧ್ಯತೆಯ ಬಗ್ಗೆ ವಿಜ್ಞಾನ ಚಿಂತಿಸಬೇಕಷ್ಟೆ. ಒಂದು ದಿನ ಎಲ್ಲರೂ ಹೆಣ್ಣು ಶಿಶುಗಳನ್ನೇ ಬಯಸುವ ಕಾಲ ಬರಬಹುದು. ಅಂಥ ಪರಿವರ್ತನೆಗಾಗಿ ಮಹಿಳೆಯರು ಹೋರಾಡಬೇಕು. ಮೊಟ್ಟಮೊದಲು ಹೆಣ್ಣು ಶಿಶು/ ಭ್ರೂಣ ಹತ್ಯೆ ಮಾಡಲು ಒಪ್ಪಬಾರದು. ಇದಕ್ಕೆ ಪೂರಕವಾಗಿ ಹೆಣ್ಣು ಮಕ್ಕಳು, ಸಾಕ್ಷರರಾಗಿ, ಶಿಕ್ಷಣ ಪಡೆದು ಉದ್ಯೋಗಿಗಳಾಗಿ ಸ್ವಾವಲಂಬಿಗಳಾಗಬೇಕು. ಇದಕ್ಕೆ ಬೆಂಬಲವಾಗಿ ಸರ್ಕಾರ

ಸ್ವಯಂಸೇವಾ ಸಂಸ್ಥೆಗಳು, ಶಿಕ್ಷಣ ವ್ಯವಸ್ಥೆ ಮಹಿಳೆಯರಿಗೆ ಹಾಗೂ ಪುರುಷರಿಗೆ ಕೂಡ ಈ ನಿಟ್ಟಿನಲ್ಲಿ ಅರಿವು ಮೂಡಿಸಬೇಕು.

ಸ್ತ್ರೀ ಭ್ರೂಣ ಹತ್ಯೆಯಿಂದ ೧೯೦೧ರಲ್ಲಿ ಪ್ರತಿ ೧೦೦೦ ಪುರುಷರಿಗೆ ೯೭೨ರಷ್ಟು ಇದ್ದ ಮಹಿಳೆಯರ ಸಂಖ್ಯೆ ೨೦೦೯ರಲ್ಲಿ ೧೦೦೦ ಕ್ಕೆ ೯೨೭ಕ್ಕೆ ಇಳಿದಿದೆ ಎಂದರೆ ಪ್ರತಿ ವರ್ಷವು ದೇಶದ ಜನಸಂಖ್ಯೆಯಲ್ಲಿ ಸ್ತ್ರೀಯರ ಪ್ರಮಾಣ ಇಳಿಯುತ್ತಿರುವ ಈ ಕ್ರಮ ಕಳವಳಕಾರಿಯಾಗಿದೆ.

### ಇ) ಅತ್ಯಾಚಾರ:

ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯಗಳಲ್ಲಿ ಅತ್ಯಾಚಾರವು ಒಂದು. ದೇಹ ರಚನೆಯ ಮೂಲಕವೇ ಹೆಣ್ಣನ್ನು ಗುರುತಿಸುವುದು, ಆ ದೇಹದ ಮೇಲೆ ಎಂದು ಹಕ್ಕನ್ನು ಸ್ಥಾಪಿಸುವುದು. ಪಿತೃಪ್ರಧಾನ ವ್ಯವಸ್ಥೆಯ ಆಶಯವಾಯಿತೋ ಅಂದೇ ಹೆಣ್ಣಿನ ಪಾವಿತ್ರ್ಯ ಹಾಗೂ ನಾಶದಂತಹ ಮೌಲ್ಯಗಳು ಸಮಾಜದಲ್ಲಿ ಸೇರಿಕೊಂಡಿವೆ. ಹೆಣ್ಣನ್ನು ಒಂದೆಡೆ ನೀನು ಪವಿತ್ರಳಾಗಿಯೇ ಉಳಿಯಬೇಕೆಂದು ಒತ್ತಾಯಿಸುವುದು, ಇನ್ನೊಂದೆಡೆ ಅವಳನ್ನು ಅಪವಿತ್ರಗೊಳಿಸುವುದರಲ್ಲೇ ತನ್ನ ಪುರುಷಾರ್ಥ ಅಡಗಿದೆ ಎಂದು ಭಾವಿಸುವುದು ಪುರುಷ ಪ್ರಧಾನತೆಯ ಕಾರ್ಯ ತಂತ್ರವಾಗಿದೆ.

ಪ್ರಾಚೀನ ಕಾಲದಿಂದಲೂ, ಇತಿಹಾಸದುದ್ದಕ್ಕೂ ವ್ಯಕ್ತಿಗಳ ನಡುವಿನ ಸಂಘರ್ಷವಿರಲಿ, ಸಮಾಜಗಳ ನಡುವಿನ ಸಂಘರ್ಷವಿರಲಿ ಅದು ಹೆಣ್ಣಿನ ಪಾವಿತ್ರ್ಯ ಹಾಗೂ ಅಪವಿತ್ರತೆಯ ಪರಿಕಲ್ಪನೆಯ ಸುತ್ತಲೇ ಬಂದಿದೆ. ಸಮಾಜ ರಚನೆಯ ಆರಂಭಿಕ ಹಂತದಿಂದಲೇ ಸ್ತ್ರೀಯನ್ನು ಅಪಹರಿಸುವುದು, ಅಪಹರಣಗೊಳ್ಳಬಾರದೆಂದು ಬಂಧಿಸುವುದು ನಡೆದಿದೆ. ಹೀಗೆ ನಿರಂತರವಾಗಿ ನಡೆಯುತ್ತಲೇ ಬಂದ ದೌರ್ಜನ್ಯಗಳ ಜೊತೆಗೆ ಗಟ್ಟಿಗೊಳ್ಳುತ್ತಿರುವ ಪಾವಿತ್ರ್ಯದ ಕಲ್ಪನೆಗಳು ದೌರ್ಜನ್ಯಗಳನ್ನು ಮತ್ತಷ್ಟು ಭೀಕರಗೊಳಿಸುತ್ತಿವೆ. ರಕ್ಷಣೆಯ ಹೆಸರಿನಲ್ಲಿ ಸ್ತ್ರೀಯನ್ನು ನಿಶ್ಯಕ್ತಳಾಗಿಸುವುದು, ಪೌರುಷದ ಹೆಸರಿನಲ್ಲಿ ಅತ್ಯಾಚಾರವೆಸುಗುವುದು, ಪಾವಿತ್ರ್ಯದ ಹೆಸರಿನಲ್ಲಿ ದೌರ್ಜನ್ಯಕ್ಕೊಳಗಾದ ಸ್ತ್ರೀಯನ್ನು ಅಪಮಾನಿಸುವುದು.

ಇತಿಹಾಸದುದ್ದಕ್ಕೂ ಯುದ್ಧ ವೀರರು ತಮ್ಮ ಪೌರುಷದ ಸಂಕೇತವಾಗಿ ದಿಗ್ವಿಜಯದ

ಉಡುಗೊರೆ ಎಂಬಂತೆ ಸೋತವರ ಸ್ತ್ರೀಯರ ಮೇಲೆ ಅತ್ಯಾಚಾರಗಳಲ್ಲಿ ತೊಡಗಿದ್ದಂತೆ, ಆಧುನಿಕ ಸಂದರ್ಭದಲ್ಲಿ ಕೂಡ ಪೊಲೀಸ್ ಠಾಣೆಗಳಲ್ಲಿ ನಡೆಯುವ ಅತ್ಯಾಚಾರಗಳ ಪಟ್ಟಿ ದೊಡ್ಡದಿದೆ. ಅಧಿಕಾರಿಗಳು, ಪೊಲೀಸರು, ಭೂ ಮಾಲಿಕರು ಮಹಿಳೆಯರ ಮೇಲೆ ದೌರ್ಜನ್ಯವನ್ನು ಎಸಗುತ್ತಿದ್ದಾರೆ.

'ಅರಿವಿಗೆ ಗುರುವೇ ಕಾರಣ' ಎಂಬ ಮಾತು ಎಷ್ಟು ಮೌಲ್ಯವಾದ ಮಹತ್ವವನ್ನು ಪಡೆದಿದೆ. ಆದರೆ ಗುರು ಎನಿಸಿಕೊಂಡ ಪುರುಷ ರಾಕ್ಷಸ ಪ್ರವೃತ್ತಿಯಿಂದ ಏನೂ ಅರಿಯದ ಮುಗ್ಧ ಬಾಲಕಿಯರ ಮೇಲೆ ಶಾಲೆಗಳಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳ ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ ನಡೆಸುತ್ತಿರುವುದು ನಾಚಿಕೆತರುವ ವಿಷಯವಾಗಿದೆ.ಈ ಕಾರಣಗಳಿಂದಾಗಿ ಇತ್ತೀಚೆಗಷ್ಟೆ ಹೆಣ್ಣು ಮಕ್ಕಳಿಗೆ ಶಿಕ್ಷಣ ಒದಗಿಸಲು ಮನಸ್ಸು ಮಾಡಿ ಮುಂದೆ ಬಂದಿರುವ ಸುಶಿಕ್ಷಿತ ಗ್ರಾಮೀಣ ಪ್ರದೇಶದ ಜನರು ಮತ್ತೆ ಹಿಂದಕ್ಕೆ ಸರಿಯುವಂತೆ ಆಗುತ್ತಿದೆ.

ಪಿತೃ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ತನ್ನ ಲೈಂಗಿಕ ಆಕಾಂಕ್ಷೆಗಳನ್ನು ಪ್ರಕಟಿಸುವ, ಹೊಂದುವ ಅವಕಾಶ ಹೇಗೆ ನಿರಾಕರಿಸಲ್ಪಟ್ಟಿದೆಯೋ ಹಾಗೇ ವಿವಾಹ ಸಂಸ್ಥೆಯೊಳಗೆ ಅದನ್ನು ನಿರಾಕರಿಸುವ ಹಕ್ಕನ್ನು ಕಿತ್ತುಕೊಳ್ಳಲಾಗಿದೆ. ತನಗೆ ಬೇಕಿರಲಿ, ಇಲ್ಲದಿರಲಿ ಗಂಡನೆಂಬ ಕಾರಣಕ್ಕೆ ಆತನ ದೌರ್ಜನ್ಯಗಳನ್ನು ಸಹಿಸುವ ಅನಿವಾರ್ಯತೆ ಏರ್ಪಟ್ಟಿದೆ. ಸಮಾಜವು ಗಂಡನ ಲೈಂಗಿಕ ಆಕಾಂಕ್ಷೆಯನ್ನು ತೃಪ್ತಿಪಡಿಸುವುದೇ ಹೆಣ್ಣಿನ ಕರ್ತವ್ಯವೆಂದು ಭಾವಿಸುತ್ತದೆ. ಅಲ್ಲದೆ ಪುರುಷನ ಲೈಂಗಿಕತೆಯು ಈಡೇರದಿದ್ದಾಗ ಆತ ವಿವಾಹದ ಚೌಕಟ್ಟನ್ನು ಮುರಿಯುವುದನ್ನು ಸಾಧ್ಯವೆಂದು ತೀರ್ಮಾನಿಸುತ್ತದೆ. ಹಾಗಾಗಿ ವಿವಾಹ ಕುಟುಂಬವನ್ನೇ ನೆಚ್ಚಿ ಬದುಕಬೇಕಾದ ಹೆಣ್ಣು ಗಂಡನಿಂದಲೇ ಒದಗುವ ಅನುದಿನದ ಅತ್ಯಾಚಾರಕ್ಕೆ ತನ್ನನ್ನು ಅನಿವಾರ್ಯವಾಗಿ ಒಡ್ಡಿಕೊಳ್ಳಬೇಕಾಗುತ್ತದೆ.

ಅತ್ಯಾಚಾರದ ವಿರುದ್ಧದ ಪ್ರಬಲ ಹೋರಾಟದಿಂದಾಗಿ ''ಭಾರತ ಕಾನೂನು ಸಮಿತಿಯು ಅತ್ಯಾಚಾರದ ಕಾನೂನಿನಲ್ಲಿ ತಿದ್ದುಪಡಿ ತರಲು ಸಮಿತಿಯೊಂದನ್ನು ರಚಿಸಿತು. ಸಮಿತಿಯು ಹಲವಾರು ಉಪಯುಕ್ತ ಮಾಹಿತಿಗಳನ್ನು ನೀಡಿತಾದರೂ ಅವುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳದೇ ೧೯೮೨ರಲ್ಲಿ ತಿದ್ದುಪಡಿ ಕಾಯ್ದೆಯೊಂದನ್ನು ಜಾರಿಗೊಳಿಸಿತು. ಈ ತಿದ್ದುಪಡಿಯು ಮುಖ್ಯವಾಗಿ ಅತ್ಯಾಚಾರಕ್ಕೊಳಗಾದ ಮಹಿಳೆಯ

ಪ್ರಕರಣವನ್ನು ಉಳಿದೆಲ್ಲ ದೌರ್ಜನ್ಯಗಳಿಗಿಂತ ಭಿನ್ನವಾಗಿ ಗ್ರಹಿಸಬೇಕಾಗುತ್ತದೆ ಎಂದು ಒಪ್ಪಿತು''[೬].

ಮನೆಯಲ್ಲಿ, ಉದ್ಯೋಗ ಸ್ಥಳದಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಹಾಡು ಹಗಲೇ ಅತ್ಯಾಚಾರಕ್ಕೊಳಗಾಗುವ ಲೈಂಗಿಕ ಕಿರುಕುಳಗಳನ್ನು ಅನುಭವಿಸುವ ಮಹಿಳೆಯರು ಅಸಹಾಯಕರಾಗಿ ನಿಲ್ಲುವಂತಾಗಿದೆ. ಮಹಿಳೆಯರನ್ನು ಹಿಮ್ಮೆಟ್ಟಿಸುವ ಪ್ರಬಲ ಆಯುಧವಾಗಿ ಲೈಂಗಿಕ ಕಿರುಕುಳಗಳನ್ನು ಯಶಸ್ವಿಯಾಗಿ ಬಳಸಬಹುದೆಂಬ ಭಾವನೆ ಪುರುಷರಲ್ಲಿ ಬಲಗೊಳ್ಳುತ್ತಿದೆ. ಲೈಂಗಿಕ ಕಿರುಕುಳವೊಂದು ಸಾಮಾಜಿಕ ಪಿಡುಗಾಗಿ ಬೆಳೆಯುತ್ತಿದೆ. ಇದೆಲ್ಲವನ್ನು ಗಮನಿಸಿ ಮಹಿಳಾ ಚಳುವಳಿಗಳು ಅತ್ಯಾಚಾರ ಸಂಬಂಧಿ ಕಾನೂನನ್ನು ಮತ್ತಷ್ಟು ವ್ಯಾಪಕ ಹಾಗೂ ಸಶಕ್ತಗೊಳಿಸಬೇಕೆಂದು ಹೋರಾಟಕ್ಕಿಳಿದಿದೆ. ಕಾನೂನಿನಲ್ಲಿ ಎಲ್ಲಿಯೂ ತಪ್ಪು ಅರ್ಥಗಳು ದೊರೆಯದ ರೀತಿಯಲ್ಲಿ ಅದನ್ನು ಸ್ಪಷ್ಟಪಡಿಸುವುದು ಈ ದಿಕ್ಕಿನಲ್ಲಿ ಅಗತ್ಯವೆನಿಸುತ್ತದೆ. ಉದಾ: ಅತ್ಯಾಚಾರ ಎಂದರೇನು ಎನ್ನುವಾಗ ವಿವಾಹಿತ ಸ್ತ್ರೀಯ ಮೇಲೆ ಗಂಡನು ನಡೆಸುವ ಬಲವಂತ, ವೇಶ್ಯೆಯ ಇಚ್ಛೆಗೆ ವಿರುದ್ಧವಾಗಿ ಅವಳನ್ನು ಬಳಸುವುದು, ಉನ್ನತ ಅಧಿಕಾರಿಗಳು ತಮ್ಮ ಕೈ ಕೆಳಗೆ ಕೆಲಸ ಮಾಡುವ ಮಹಿಳೆಯರ ಮೇಲೆ ಒತ್ತಡ ತಂದು, ಹೆದರಿಸಿ ಸಮ್ಮತಿಯ ಮೇಲೆ ಅತ್ಯಾಚಾರವೆಸಗುವುದು ಇತ್ಯಾದಿಗಳನ್ನು ಕಾನೂನಿನಲ್ಲಿ ಸ್ಪಷ್ಟಪಡಿಸಬೇಕು. ಅತ್ಯಾಚಾರವೆನ್ನುವುದನ್ನು ಲೈಂಗಿಕ ಕ್ರಿಯೆ ಆಗಿದ್ದರೆ ಮಾತ್ರ ಎಂದು ಪರಿಗಣಿಸದೆ ಎಲ್ಲ ಬಗೆಯ ಅಸಭ್ಯವರ್ತನೆಯನ್ನು ಅದಕ್ಕೆ ಸೇರಿಸಬೇಕು.

### ಈ) ಬಾಲ್ಯವಿವಾಹ:

ಸಾಮಾನ್ಯರ್ಥದಲ್ಲಿ ವಿವಾಹವು ಸ್ತ್ರೀ ಪುರುಷರಿಬ್ಬರಿಗೂ ಅನಿವಾರ್ಯವೆನ್ನಲಾದರೂ, ಈ ಅನಿವಾರ್ಯತೆಯು ಸ್ತ್ರೀಗೆ ಅಧೀನತೆಯನ್ನು ಪುರುಷನಿಗೆ ಅಧಿಕಾರವನ್ನು ದೊರಕಿಸಿಕೊಡುವುದಾಗಿದೆ. ಭಾರತೀಯ ಸಮಾಜದಲ್ಲಿ ಪುರುಷನಿಗೆ ಆಯ್ಕೆಯ ವಿಚಾರವಾಗಿದೆ. ಸ್ತ್ರೀಗೆ ಆಯ್ಕೆಯ ಮಾದರಿಗಳೇ ಇಲ್ಲ. ವಿವಾಹವು ಧರ್ಮ ಸಮ್ಮತವಾಗಿ ಸಂತಾನವನ್ನು ಪಡೆಯಲು ನಡೆಸುವ ದಾಂಪತ್ಯ ಜೀವನವಾಗುತ್ತದೆ. ವ್ಯಕ್ತಿಗಳು ವಿವಾಹದ ಮೂಲಕ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆಯಿರುವ ಕಾರಣ ವಿವಾಹವಾದ ನಂತರ ಹುಡುಗಿ ಗಂಡನ ಮನೆಯಲ್ಲಿ ವಾಸಮಾಡುತ್ತಾಳೆ. ಅವಳ ಎಲ್ಲಾ ಜೀವನವು ಗಂಡನ ಅಧೀನವಾಗಿರುತ್ತದೆ.

ಭಾರತೀಯ ಸಮಾಜದಲ್ಲಿ ಬಾಲ್ಯ ವಿವಾಹವು ಎಂದು ಆರಂಭಗೊಂಡಿತೆಂದು ನಿಖರವಾಗಿ ಹೇಳಲಾಗದಿದ್ದರೂ ಅದನ್ನು ಮಧ್ಯಕಾಲೀನ ಬೆಳವಣಿಗೆ ಎಂಬುದಾಗಿ ಸ್ವೀಕರಿಸಲಾಗಿದೆ. ಬಹುಶಃ ಕಾಲದಿಂದ ಕಾಲಕ್ಕೆ ಹೆಚ್ಚುತ್ತಾ ಹೋದ ಪಾವಿತ್ರ್ಯದ ಕಲ್ಪನೆ, ಹೆಣ್ಣಿನ ಪಾವಿತ್ರ್ಯ ನಾಶವನ್ನೇ ಪೌರುಷದ ಸಂಕೇತವಾಗಿ ಪ್ರಕಟಿಸುತ್ತಾ ಬಂದ ಸಾಮಾಜಿಕ ಧೋರಣೆಗಳ ನಡುವಿನ ತಿಕ್ಕಾಟದಲ್ಲಿ ವಿವಾಹವೇ ಸ್ತ್ರೀಗೆ ಭದ್ರತೆಯನ್ನೊದಗಿಸುವ, ಪಾವಿತ್ರ್ಯವನ್ನು ರಕ್ಷಿಸುವ ಏಕೈಕ ಸಂಸ್ಥೆ ಎಂಬ ನಿಲುವು ಬಲಗೊಳ್ಳುತ್ತಾ ಹೋಗಿ ಅಂತಿಮವಾಗಿ ಅದು ಬಾಲ್ಯವಿವಾಹ ಹಂತವನ್ನು ತಲುಪಿತು. ಹೆಣ್ಣಿಗೆ ವಿವಾಹವೇ ಅಂತಿಮ ಎನ್ನುವುದಾದರೆ ಅದನ್ನು ಆದಷ್ಟೂ ಬೇಗನೇ ಜರುಗಿಸುವುದು, ಹೆಣ್ಣು ಕುಟುಂಬಕ್ಕೆ ಹೊರೆ ಎನ್ನುವುದಾದರೆ ಅದನ್ನು ವಿವಾಹ ಮೂಲಕ ಆದಷ್ಟು ಬೇಗನೆ ಇಳಿಸಿಕೊಳ್ಳುವುದು ಸರಿಯೆಂದು ಚಿಕ್ಕ ವಯಸ್ಸಿನಲ್ಲೇ ವಿವಾಹಕ್ಕೆ ಒಳಪಡಿಸಿದರು.

ಬಾಲ್ಯ ವಿವಾಹ ಹಾಗೂ ಅಸಮ ವಿವಾಹಗಳಿಂದಾಗಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಿರಿಯ ವಯಸ್ಸಿಗೆ ವಿಧವೆಯಾಗುತ್ತಿದ್ದ ಮಹಿಳೆಯರು ಅತ್ಯಂತ ದುರ್ಬಲವಾದ ಜೀವನವನ್ನು ನಡೆಸಬೇಕಾಗುತ್ತಿತ್ತು. ವ್ಯಕ್ತಿಗತವಾದ ಒಂಟಿತನವಿರಲಿ, ಸಾಮಾಜಿಕ ಸ್ಥಾನಮಾನದ ಕೊರತೆಯಿರಲಿ, ಆರ್ಥಿಕ ಅಭದ್ರತೆಯಾಗಲಿ ಎಂದೂ ಪರಿಹಾರ ಕಾಣಲಾರದ ದುಃಸ್ಥಿತಿಗಳಾಗಿ ಆಕೆ ಸತಿಯಂತಹ ಆಚರಣೆಯನ್ನು ಸ್ವೀಕರಿಸುವ ಮಟ್ಟಕ್ಕೆ ಬೆಳೆಯಿತು.

ಸತೀ ಪದ್ಧತಿಯ ನಿಷೇಧಕ್ಕಾಗಿ ಒತ್ತಾಯಿಸತೊಡಗಿದ ಸುಧಾರಣಾ ವಾದಿಗಳು ಅದರ ಬೆನ್ನಿಗೇ ವಿಧವಾ ವಿವಾಹದ ಮನ್ನಣೆಯೊಂದಿಗೆ, ಬಾಲ್ಯ ವಿವಾಹದ ನಿಷೇಧ ಒತ್ತಾಯ ತಂದರು. ಬಾಲ್ಯ ವಿವಾಹ ನಿಷೇಧದ ಹೊರತು ವಿಧವಾ ಸಮಸ್ಯೆಯನ್ನಾಗಲಿ, ಸ್ತ್ರೀ ಶಿಕ್ಷಣ ವಿಚಾರವನ್ನಾಗಲಿ ಕೈಗೆತ್ತಿಕೊಳ್ಳುವುದು ವ್ಯರ್ಥವೆಂದು ಮನಗಂಡರು. ಈ ಅಭ್ಯಾಸದ ವಿರುದ್ಧ ಅಂದಿನ ಬಹುತೇಕ ಎಲ್ಲಾ ಸುಧಾರಣಾವಾದಿಗಳು ದನಿ ಎತ್ತಿದರು. ಹಿಂದೂ ಸಮಾಜದ ವಿಧವಾ ಸಮಸ್ಯೆಯು ನೇರ ಕಾರಣವಾಗಿ ಕಂಡು ಬಾಲ್ಯವಿವಾಹದ ವಿರುದ್ಧ ಬ್ರಹ್ಮ ಸಮಾಜ, ಆರ್ಯ ಸಮಾಜಗಳು ಕಾರ್ಯಾಚರಣೆಗೆತೊಡಗಿದವು. ''ಬ್ರಹ್ಮ ಸಮಾಜವು ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ೧೪ಕ್ಕೆ ನಿಗದಿಗೊಳಿಸಿತು. ಈಶ್ವರ ಚಂದ್ರ ವಿದ್ಯಾಸಾಗರರಂತೂ ವಿಧವಾ ವಿವಾಹಕ್ಕೆ ಹಠಹಿಡಿದಂತೆಯೇ ಇದರ ಬಗೆಗೂ ಕಾನೂನುಗೊಳಿಸಲು ತೀವ್ರ ಒತ್ತಡ ತಂದರು. ಪರಿಣಾಮವಾಗಿ ೧೮೬೦ರಲ್ಲಿ ಇಂಡಿಯನ್ ಪೀನಲ್ ಕೋಡ್ ೧೦ ವರ್ಷ ವಯಸ್ಸಿನ

ಕೆಳಗಿರುವ ಹೆಂಡತಿಯ ಮೇಲಿನ ಶಾರೀರಿಕ ಸಂಬಂಧವನ್ನು ನಿಷೇಧಿಸಲಾಯಿತು''[೭].

ಇಷ್ಟಾದರೂ ಬಾಲ್ಯ ವಿವಾಹವನ್ನು ತಡೆಗಟ್ಟುವ ಯಾವ ಪರಿಣಾಮಕಾರಿ ಪ್ರಯತ್ನವು ಆಚರಣೆಗೆ ಬರಲಿಲ್ಲ. ಎಷ್ಟೋ ಜನ ಸಮಾಜ ಸುಧಾಕರು ಸ್ವತಃ ತಾವೇ ಬಾಲ್ಯ ವಿವಾಹಕ್ಕೆ ಒಳಗಾಗುತ್ತಿದ್ದರು. ೧೮೯೧ರಲ್ಲಿ ಏಜ್ ಆಫ್ ಕನ್‌ಸೆಂಟ್ ಆಕ್ಟ್‌ಗೆ ತಿದ್ದುಪಡಿ ಕಾಯ್ದೆವೊಂದನ್ನು ಜಾರಿಗೆ ತರಲಾಯಿತು. ಅದರ ಪ್ರಕಾರ ವಿವಾಹಿತ ಹೆಂಗಸಿನೊಂದಿಗೆ ಶಾರೀರಕ ಸಂಬಂಧದ ವಯಸ್ಸು ೧೦ ರಿಂದ ೧೨ಕ್ಕೇರಿತು. ನಂತರ ೧೯೨೯ರಲ್ಲಿ ಸರ್ಕಾರದ ಕಾಯ್ದೆ ೧೪ ವರ್ಷಕ್ಕೆ ವಿವಾಹದ ವಯಸ್ಸನ್ನು ನಿಗದಿಗೊಳಿಸಿತು. ಹೀಗೆ ಶಾರೀರಿಕ ಸಂಬಂಧ ಎಂಬ ನಿರ್ಬಂಧಕ್ಕೆ ಬದಲಾಗಿ ವಿವಾಹ ವಯಸ್ಸಿಗೆ ನಿರ್ಬಂಧ ತಂದುದರಿಂದ ಬಾಲ್ಯ ವಿವಾಹದ ಮೇಲೆ ಹೆಚ್ಚಿನ ಹತೋಟಿ ಹೊಂದಲು ಸಾಧ್ಯವಾಯಿತು. ಇಷ್ಟಾದರೂ ರಾಜಸ್ಥಾನ, ಗುಜರಾತ್ ರಾಜ್ಯಗಳಲ್ಲಿ ಈಗಲೂ ಬಾಲ್ಯವಿವಾಹಗಳು ಕಂಡುಬರುತ್ತಿವೆ. ಅಲ್ಲದೆ ನಮ್ಮ ರಾಜ್ಯದಲ್ಲೂ ಗುಲ್ಬರ್ಗ, ಬೀದರ್ ಜಿಲ್ಲೆಗಳಲ್ಲಿ ಅಲ್ಲಲ್ಲೆ ಬಾಲ್ಯವಿವಾಹವನ್ನು ಕಾಣಬಹುದು.

ಮಹಿಳೆಯರ ಸ್ಥಾನಮಾನ ಮತ್ತು ಸಾರ್ವಜನಿಕ ಅವಕಾಶಗಳು ವಿಸ್ತಾರಗೊಂಡಂತೆಲ್ಲ ಮದುವೆ ವಯಸ್ಸಿನಲ್ಲಿ ಏರಿಕೆಯನ್ನು ತಂದಿದೆ. ೧೯೭೮ರಲ್ಲಿ ತಂದ ತಿದ್ದುಪಡಿಯ ಪ್ರಕಾರ ಮದುವೆಯಾಗುವ ಹೆಣ್ಣು ಮತ್ತು ಗಂಡಿನ ವಯಸ್ಸು ೧೮-೨೧ ಎಂದು ನಿರ್ಧರಿಸಿದೆ.

## ಉ) ವರದಕ್ಷಿಣೆ:

ವಿವಾಹದ ಸಮಯದಲ್ಲಿ ಮಗಳ ಸ್ವಂತ ಉಪಯೋಗಕ್ಕಾಗಿ ಆಕೆಯ ತಂದೆ-ತಾಯಿಗಳು ನೀಡುತ್ತಿದ್ದ 'ಸ್ತ್ರೀಧನ' ಅಥವಾ ವರನ ಕುಟುಂಬದವರು ವಧುವಿಗೆ ನೀಡುತ್ತಿದ್ದಂಥ ವಧುದಕ್ಷಿಣೆ (ಕನ್ಯಾಶುಲ್ಕ) ಪದ್ಧತಿಗಳು ಇಂದು ಮಾಯವಾಗಿ ವರದಕ್ಷಿಣೆ ಎನ್ನುವ ಅನಿಷ್ಟ ಪದ್ಧತಿ ಹೆಡೆಯೆತ್ತಿ ನಿಂತಿದೆ.

ವಿವಾಹದ ಸಮಯದಲ್ಲಿ ಹೆಣ್ಣಿನ ತಂದೆ, ತಾಯಿ ಅಥವಾ ಅಣ್ಣ ತಮ್ಮಂದಿರು ವರನಿಗೆ ಹಣದ ರೂಪದಲ್ಲಿ ಅಥವಾ ಚರಾಸ್ತಿ ಅಥವಾ ಸ್ಥಿರಾಸ್ತಿ ರೂಪದಲ್ಲಿ ಕೊಡುವುದನ್ನು ವರದಕ್ಷಿಣೆ ಎಂದು ಕರೆಯಲಾಗುತ್ತದೆ. ಚರಾಸ್ತಿಗಳಲ್ಲಿ ಬೆಳ್ಳಿ, ಬಂಗಾರ, ಒಡವೆ, ಆಭರಣಗಳು, ಮನೆ ಸಾಮಾನುಗಳು ಮೊದಲಾದ ಬೆಲೆ ಬಾಳುವ ವಸ್ತುಗಳು ಒಳಗೊಂಡಿರುತ್ತವೆ

ವಿವಾಹಿತ ಮಹಿಳೆ ಗಂಡ ಅಥವಾ ಅತ್ತೆ ಮನೆಯಲ್ಲಿ ವರದಕ್ಷಿಣೆಗಾಗಿ ಅನುಭವಿಸುವ ಕಿರುಕುಳವು ಸ್ತ್ರೀ ವಿರುದ್ಧ ಕೌಟುಂಬಿಕ ನೆಲೆಯಲ್ಲಿ ನಡೆಯುವ ದೌರ್ಜನ್ಯದಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತದೆ. ವಿವಾಹೋತ್ತರ ಬದುಕಿನಲ್ಲಿ ಸೊಸೆಯ ತೌರುಮನೆಯ ಹಣ, ಆಸ್ತಿಗಳು ತಮಗೆ ಸೇರಬೇಕೆಂಬ ನಿರೀಕ್ಷೆಯನ್ನು ಗಂಡಿನ ಮನೆಯವರು ಇಟ್ಟುಕೊಳ್ಳುವುದು, ಅದು ಅಲಭ್ಯವೆಂದುಕೊಂಡಾಗ ಅವಳಿಗೆ ಕಿರುಕುಳವನ್ನು ನೀಡುವುದು ಹಲವು ವಿಧದ ಅನರ್ಥಗಳಿಗೆ ದಾರಿ ಮಾಡಿಕೊಟ್ಟಿದೆ. ಹೆಚ್ಚಿನ ಸಂದರ್ಭಗಳಲ್ಲಿ ವರದಕ್ಷಿಣೆ ಕಿರುಕುಳವು ಮಾನಸಿಕ ಹಾಗೂ ದೈಹಿಕ ಹಿಂಸೆಯ ರೂಪದಲ್ಲಿ ಕಾಣಿಸಿಕೊಳ್ಳುವುದರಿಂದ ಕೊಲೆ ಅಥವಾ ಆತ್ಮಹತ್ಯೆಯಲ್ಲಿ ವಿವಾಹಿತ ಮಹಿಳೆಯ ಬದುಕು ಕೊನೆಗೊಳ್ಳುವುದು. ಸಾಮಾನ್ಯವಾಗಿ ವರದಕ್ಷಿಣೆಯ ಕಾರಣವನ್ನು ಮುಂದಿಟ್ಟು ಗಂಡ, ಅತ್ತೆ ಮಾವ ಅಥವಾ ಗಂಡನ ಬಂಧುಗಳು ವಿವಾಹಿತ ಮಹಿಳೆಗೆ ದೈಹಿಕ ಮತ್ತು ಮಾನಸಿಕ ಹಿಂಸೆಯನ್ನು ನೀಡುತ್ತಾರೆ. ಅವರು ಅವಳನ್ನು ತೌರುಮನೆಗೆ ಕಳುಹಿಸಿ ನಿರೀಕ್ಷಿಸಿದ ಹಣವನ್ನು ತರುವವರೆಗೆ ಮನೆಗೆ ಬರದಂತೆ ತಡೆಯುವುದು, ಹೆತ್ತ ಮಕ್ಕಳಿಂದ ಅವಳನ್ನು ದೂರವಿಡುವುದು, ಆಹಾರ ನೀಡದೆ ಅವಳನ್ನು ಉಪವಾಸ ಹಾಕುವುದು, ಹೊರಗಿನವರೊಂದಿಗೆ ಬೆರೆಯಲು ತಡೆಯುವುದು, ತೌವರು ಹೊಡೆತ ಬಡಿತಗಳ ಮೂಲಕ ಅವಳಿಗೆ ದೈಹಿಕ ನೋವನ್ನು ಉಂಟುಮಾಡುವುದು, ಅವಳ ಮೇಲೆ ಸೀಮೆ ಎಣ್ಣೆ ಸುರಿದು, ಬೆಂಕಿಇಟ್ಟು ಸುಟ್ಟುಹಾಕುವುದು ಇತ್ಯಾದಿ ಹಿಂಸೆಗಳು.

ಅರವತ್ತರ ದಶಕದಲ್ಲಿ ಸಮಾಜದ ಮೇಲುವರ್ಗದ ಸುಶಿಕ್ಷಿತ ನಗರ ಪ್ರದೇಶದ ಮಹಿಳೆಯರು ವರದಕ್ಷಿಣೆಯ ಪಿಡುಗಿಗೆ ಬಲಿಯಾದ ಹಲವು ಪ್ರಕರಣಗಳು ಸಾರ್ವಜನಿಕ ಚರ್ಚೆಗೆ, ಬಹಿರಂಗ ಪ್ರತಿಭಟನೆಗೆ ಕಾರಣವಾದ ಹಿನ್ನೆಲೆಯಲ್ಲಿ ನ್ಯಾಯವ್ಯವಸ್ಥೆ ವರದಕ್ಷಿಣೆ ಸಂಪ್ರದಾಯವನ್ನು ಅಪರಾಧವಾಗಿ ಪರಿಗಣಿಸಿದೆ. ''ವರದಕ್ಷಿಣೆ ನೀಡುವ ಅಥವಾ ಪಡೆಯುವ ಅಪರಾಧಕ್ಕೆ ಕನಿಷ್ಠ ಐದು ವರ್ಷಗಳ ಕಾರಾಗೃಹವಾಸ ಮತ್ತು ಹದಿನೈದು ಸಾವಿರ ರೂಗಳವರೆಗೆ ಜುಲ್ಮಾನೆ, ವರದಕ್ಷಿಣೆ ಕೇಳುವ ಅಪರಾಧಕ್ಕೆ ಕನಿಷ್ಠ ಎರಡು ವರ್ಷಗಳ ಕಾರಾಗೃಹವಾಸ ಮತ್ತು ಹತ್ತು ಸಾವಿರ ರೂಗಳವರೆಗೆ ಜುಲ್ಮಾನೆ. ಮಹಿಳೆಯ ಸಾವು ಸುಟ್ಟಗಾಯಗಳಿಂದ, ದೈಹಿಕ ಗಾಯಗಳಿಂದ ಅಥವಾ ಅಸಹಜ ಕಾರಣಗಳಿಂದ ಉಂಟಾದರೆ ಅದನ್ನು ವರದಕ್ಷಿಣೆ ಸಾವು ಎಂದು ಪರಿಗಣಿಸಲಾಗುವುದು. ಭಾರತ ದಂಡ ಸಂಹಿತೆಯ ೩೦೪ (ಬಿ) ಪ್ರಕರಣದ ಪ್ರಕಾರ ವರದಕ್ಷಿಣೆ ಕಿರುಕುಳವು ಅಪರಾಧವಾಗಿದೆ'' [೮]. ೩೦೪ (ಬಿ) ಪ್ರಕರಣದಲ್ಲಿ ವರದಕ್ಷಿಣೆ ಸಾವಿನ ಅಪರಾಧವನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

''ಮಹಿಳೆಯ ಸಾವು ಮದುವೆಯಾದ ಏಳು ವರ್ಷದೊಳಗೆ ಸುಟ್ಟ ಗಾಯಗಳಿಂದ ಅಥವಾ ದೈಹಿಕ ಗಾಯಗಳಿಂದ ಅಥವಾ ಸಹಜ ಸಂದರ್ಭಗಳಲ್ಲಿ ಅಲ್ಲದೆ ಅನ್ಯಥಾ ಉಂಟಾದರೆ ಮತ್ತು ಅವಳ ಸಾವಿನ ನಿಕಟ ಪೂರ್ವದಲ್ಲಿ ವರದಕ್ಷಿಣೆಗಾಗಿ ಅಥವಾ ವರದಕ್ಷಿಣೆಯ ಸಂಬಂಧದಲ್ಲಿ ಅವಳ ಪತಿಯಿಂದ ಅಥವಾ ಅವಳ ಪತಿಯ ಸಂಬಂಧಿಯಿಂದ ಅವಳು ಹಿಂಸೆಗೆ ಅಥವಾ ಕಿರುಕುಳಕ್ಕೆ ಗುರಿಯಾಗಿದ್ದಳು ಎಂಬುದನ್ನು ರುಜುವಾತು ಪಡಿಸಿದ್ದಾದರೆ ಅಂತಹ ಸಾವನ್ನು 'ವರದಕ್ಷಿಣೆ ಸಾವು' ಎಂದು ಕರೆಯತಕ್ಕದ್ದು. ಮತ್ತು ಅಂಥ ಪತಿ ಅಥವಾ ಸಂಬಂಧಿ ಈ ಸಾವಿಗೆ ಕಾರಣ ಎಂಬುದಾಗಿ ಭಾವಿಸತಕ್ಕದ್ದು. ವರದಕ್ಷಿಣೆ ಕುರಿತಾಗಿ ಅಧಿನಿಯಮಗಳು, ತಿದ್ದುಪಡಿಗಳು ಜಾರಿಗೆ ಬಂದು ದಶಕಗಳೇ ಕಳೆದರೂ ಕೂಡ ವರದಕ್ಷಿಣೆಯ ಕಿರುಕುಳದ ಕಾರಣವಾಗಿ ಪ್ರತಿನಿತ್ಯವು ಸಾವು, ನೋವುಗಳು ಹೆಚ್ಚಾಗುತ್ತಿದೆ. ಹಣದ ವ್ಯಾಮೋಹ ಮತ್ತು ಐಷಾರಾಮಿ ಜೀವನಕ್ಕಾಗಿ ದೌರ್ಜನ್ಯದ ರೂಪದಲ್ಲಿ ಕಾಣಿಸಿಕೊಳ್ಳುವ ವರದಕ್ಷಿಣೆ ಕಿರುಕುಳವು ಕೊನೆಯಾಗಬೇಕೆಂದರೆ ಕುಟುಂಬದ ಸದಸ್ಯರ ಸಹಕಾರ ಅತೀ ಅಗತ್ಯವಾಗಿದೆ.

ಸಾರ್ವಜನಿಕವಾಗಿ ಈ ಅಮಾನವೀಯ ಪದ್ಧತಿಯನ್ನು ಖಂಡಿಸುತ್ತಾ ಖಾಸಗಿ ಬದುಕಿನಲ್ಲಿ ಅದರ ಆಚರಣೆಯನ್ನು ಸಮರ್ಥಿಸುತ್ತಾ ಹೋಗುತ್ತಿರುವವರು ನಮ್ಮಲ್ಲಿ ಬಹುಮಂದಿ ಇದ್ದಾರೆ. ಈ ಸಮಾಜದಲ್ಲಿ ಲಂಚಕೋರತನ ಎಷ್ಟು ಸಾಮಾಜಿಕವಾಗಿ ಅಂಗೀಕಾರವನ್ನು ಪಡೆದಿದೆಯೋ ವರದಕ್ಷಿಣೆಗೂ ಅಷ್ಟೇ ಮಟ್ಟದ ಸಾಮಾಜಿಕ ಸ್ವೀಕೃತಿಯಾಗಿದೆ. ದಿನ ದಿನವೂ ವರದಕ್ಷಿಣೆಯ ದಾಹಕ್ಕೆ ಬಲಿಯಾಗುತ್ತಿರುವ ಹೆಣ್ಣು ಮಕ್ಕಳ ಸಂಖ್ಯೆಯ ಹೆಚ್ಚಳ ಒಂದೆಡೆಯಾದರೆ, ಮತ್ತೊಂದೆಡೆ ಈ ಪದ್ಧತಿ ತನ್ನ ಬೇರುಗಳನ್ನು ಹೆಚ್ಚು ಹೆಚ್ಚಿನ ಪ್ರಖರತೆಯಿಂದ ಸಮಾಜದಲ್ಲಿ ಹರಡುತ್ತಿದೆ. ವರದಕ್ಷಿಣೆಯ ಭೂತ ತನ್ನ ಕೆನ್ನಾಲಿಗೆಯನ್ನು ಚಾಚಿ ಅನೇಕ ಹೆಣ್ಣು ಮಕ್ಕಳನ್ನೂ ಕುಟುಂಬಗಳನ್ನೂ ತನ್ನೊಳಗೆ ಎಳೆದುಕೊಳ್ಳುತ್ತಿದೆ. ದಿನ ನಿತ್ಯವೂ ಪತ್ರಿಕೆಗಳು, ಅಗ್ನಿಗೆ, ಪತಿಯ, ಅತ್ತೆಯ ಅಥವಾ ಇತರ ಬಂಧುಗಳ ಆಕ್ರೋಶಕ್ಕೆ ಬಲಿಯಾದ ಮಹಿಳೆಯರ ಪ್ರಸಂಗಗಳನ್ನು ವರದಿ ಮಾಡುತ್ತಲೇ ಇವೆ. ಬಹುಸಂಖ್ಯೆಯ ವರದಕ್ಷಿಣೆ ಸಾವುಗಳನ್ನು ಆತ್ಮ ಹತ್ಯೆಯ ಪ್ರಕರಣಗಳೆಂದು ಸಾಬೀತುಪಡಿಸಿ, ಆ ಪ್ರಕರಣಗಳನ್ನು ಮುಚ್ಚಿ ಹಾಕುವುದರಲ್ಲಿ ನಾವು ಸಿದ್ಧಹಸ್ತರಾಗಿದ್ದೇವೆ. ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲವೆಂದೋ ಸತ್ತ ಮಹಿಳೆಯರ ಸಂಬಂಧಿಗಳೇ ಆಸಕ್ತಿವಹಿಸ ಲಿಲ್ಲವೆಂದೋ ಅನೇಕ ವರದಕ್ಷಿಣೆ ಸಂಬಂಧಿ ಸಾವುಗಳು ಹಾಗೆಯೇ ಮುಚ್ಚಿ ಹೋಗುತ್ತಿವೆ.

## ಅಡಿ ಟಿಪ್ಪಣಿಗಳು:

೧. ಡಾ|| ಜ್ಯೋತಿ ಶಶಿಕುಮಾರ್ - ಮಹಿಳಾ ಸಾಮಾಜಿಕತೆ. ಪುಟ - ೯೯

೨. ಡಾ|| ಎಂ. ಉಷಾ ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು. ಪುಟ - ೯೪

೩. ಅದೇ. ಪುಟ - ೯೫

೪. ಡಾ|| ಜ್ಯೋತಿ ಶಶಿಕುಮಾರ್ - ಮಹಿಳಾ ಸಾಮಾಜಿಕತೆ. ಪುಟ - ೧೦೦

೫. ಸಂಪದಾಕ ಡಾ|| ರಾಗೌ - ಮಹಿಳಾ ಅಧ್ಯಯನದ ಆಯಾಮಗಳು. ಪುಟ - ೪೮

೬. ಡಾ|| ಎಂ. ಉಷಾ ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು. ಪುಟ - ೧೨೯

೭. ಅದೇ. ಪುಟ - ೭೯



# ಅಧ್ಯಾಯ: ೫

## ಭಾರತದಲ್ಲಿ ಸ್ತ್ರೀಯರ ಅಂತಸ್ತು

ರಾಜಕೀಯ ಹಾಗೂ ಸಾಂಸ್ಕೃತಿಕ ಬದಲಾವಣೆಗಳ ಪರಿಣಾಮವಾಗಿ ಭಾರತದಲ್ಲಿ ಸ್ತ್ರೀಯರಿಗೆ ಸ್ಥಾನಮಾನಗಳು ದೊರೆತು ಶಿಕ್ಷಣ, ಉದ್ಯೋಗ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಸಮಾನಾವಕಾಶಗಳು ಲಭಿಸುವಂತಾಯ್ತು. ಸ್ತ್ರೀಯರ ಒಟ್ಟು ಪಾತ್ರ ಹಾಗೂ ಪರಿಸ್ಥಿತಿಯ ಕುರಿತಾಗಿ ರಾಷ್ಟ್ರೀಯ ನೀತಿಯನ್ನು ರೂಪಿಸುವ ಸಂಶೋಧನೆಗಳನ್ನು ಕೈಗೊಳ್ಳುವ 'ಮಹಿಳಾ ಅಧ್ಯಯನ ಕೇಂದ್ರ'ಗಳನ್ನು ಸ್ಥಾಪಿಸುವ 'ಮಹಿಳಾ ಆಯೋಗ'ವನ್ನು ರಚಿಸುವ ಪ್ರಯತ್ನಗಳು ನಡೆದವು. ೧೯೭೫ರಲ್ಲಿ ಆಚರಿಸಲಾದ 'ಅಂತರಾಷ್ಟ್ರೀಯ ಮಹಿಳಾ' ವರ್ಷದ ಕಾರ್ಯಕ್ರಮಗಳು ಹಾಗೂ ಯುನೆಸ್ಕೊ ವತಿಯಿಂದ ಕೈಗೊಳ್ಳಲಾದ ಹಲವಾರು ಚಟುವಟಿಕೆಗಳು ಸ್ತ್ರೀಯರ ಅಂತಸ್ತು ಪಾತ್ರ ಹಾಗೂ ಸಮಸ್ಯೆಗಳ ಕುರಿತಾಗಿ ವಿಶೇಷ ಅರಿವನ್ನು ಮೂಡಿಸಿದವು. ಸ್ವತಂತ್ರ ಭಾರತದಲ್ಲಿನ ಸ್ತ್ರೀಯರು ಬದಲಾಗುತ್ತಿರುವ ಅಂತಸ್ತನ್ನು ಈ ಹಿನ್ನೆಲೆಯಲ್ಲಿಯೇ ಅರ್ಥೈಸಿಕೊಳ್ಳಬಹುದು.

ಮಹಿಳೆಯರ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ಶಾಸನಗಳು, ಶಿಕ್ಷಣ, ಆರ್ಥಿಕತೆ ಅಥವಾ ಉದ್ಯೋಗ, ರಾಜಕೀಯ ಸಹಭಾಗಿತ್ವ ಹಾಗೂ ಹಕ್ಕುಗಳ ಬಗೆಗಿನ ಅರಿವು ಈ ರಂಗಗಳಲ್ಲಿ ಕಾಣಬರುವ ಬದಲಾವಣೆಗಳ ಆಧಾರದ ಮೇಲೆ ಮಹಿಳೆಯರ ಸ್ಥಾನಮಾನಗಳನ್ನು ಅಳೆಯುವುದು ಸಾಧ್ಯವಾಗಬಹುದು.

### ಅ) ಸ್ತ್ರೀಯರ ಸ್ಥಾನಮಾನಗಳನ್ನು ಎತ್ತರಿಸಲು ಸಹಾಯಕವಾದ ಸಂವಿಧಾನಾತ್ಮಕ ಶಾಸನಗಳು.

೧) ಲಿಂಗತಾರತಮ್ಯವಿಲ್ಲದೆ ನೀಡಲಾದ ಸಂವಿಧಾನಿಕ ಸಮಾನತೆ, ಭಾರತದ ಸಂವಿಧಾನವು ಲಿಂಗತಾರತಮ್ಯ ಮಾಡದೆ ಸ್ತ್ರೀಯರಿಗೂ ಕೂಡ ಪುರುಷರಿಗೆ ಕೊಟ್ಟ ವೈಯಕ್ತಿಕ ಸ್ವಾತಂತ್ರ್ಯ, ಮೂಲಭೂತ ಹಕ್ಕುಗಳು, ವಿಚಾರ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ, ವೈವಾಹಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ - ಹೀಗೆ ಹತ್ತು ಹಲವು ಸ್ವಾತಂತ್ರ್ಯವನ್ನು ನೀಡುವುದು ಮಾತ್ರವಲ್ಲ, ಸಮಾನತೆ ಮತ್ತು ಸಮಾನಾವಕಾಶಗಳ ಹಕ್ಕು, ಶೋಷಣೆ

ವಿರುದ್ಧದ ಹಕ್ಕು ಮತ್ತು ಸಮಸ್ಯೆ ಸಂಕಷ್ಟಗಳಿಗೆ ಸಂವಿಧಾನಿಕ ಪರಿಹಾರಗಳನ್ನು ಕಂಡುಕೊಳ್ಳುವ ಹಕ್ಕುಗಳನ್ನು ಅದು ನೀಡುವುದು. 'ವಯಸ್ಕ ಮತದಾನದ ಹಕ್ಕ'ನ್ನು ಸ್ತ್ರೀಯರಿಗೂ ನೀಡಿದ್ದು ಅವರನ್ನು ಯಾವುದೇ ದೃಷ್ಟಿಯಿಂದ 'ದ್ವಿತೀಯ ದರ್ಜೆಯ' ಪ್ರಜೆಗಳನ್ನಾಗಿ ಮಾಡಿಲ್ಲ.

**ಸಾಮಾಜಿಕ ಶಾಸನಗಳು:**

ಬ್ರಿಟಿಷರ ಕಾಲದಲ್ಲಿಸ್ತ್ರೀಯರ ಹಿತದೃಷ್ಟಿಯಿಂದ ಕೈಗೊಳ್ಳಲಾಗಿದ್ದ ಕೆಲವು ಸಾಮಾಜಿಕ ಶಾಸನಗಳನ್ನು ತಿದ್ದುಪಡಿ ಮಾಡುವುದರ ಜೊತೆಗೆ ಅದೇ ಉದ್ದೇಶದಿಂದ ಇನ್ನೂ ಅನೇಕ ಹೊಸ ಶಾಸನಗಳನ್ನು ಕೈಗೊಳ್ಳಲಾಗಿದೆ ಉದಾ:

೧. ಹಿಂದೂ ವಿವಾಹ ಕಾಯ್ದೆ (೧೯೫೫): ಈ ಶಾಸನವು ಬಹು ಪತ್ನಿತ್ವ, ದ್ವಿಪತ್ನಿತ್ವ ಮತ್ತು ಬಾಲ್ಯವಿವಾಹದ ಆಚರಣೆಗಳನ್ನು ನಿಷೇಧಿಸುವುದು ಹಾಗೂ ಸ್ತ್ರೀಯರಿಗೂ ವಿಚ್ಛೇದನದ ಹಾಗೂ ಪುನರ್ವಿವಾಹದ ಹಕ್ಕುಗಳನ್ನು ನೀಡುವುದು. ಸ್ತ್ರೀ ಪುರುಷ ಸಮಾನತೆಗೆ ಈ ಶಾಸನವು ಪೂರಕವಾಗಿದೆ.

೨. ಹಿಂದೂ ಉತ್ತರಾಧಿಕಾರದ ಕಾಯ್ದೆ(೧೯೫೬): ಇದು ಪಿತ್ರಾರ್ಜಿತ ಆಸ್ತಿಯಲ್ಲಿ ಸ್ತ್ರೀಯರಿಗೂ ಉತ್ತರಾಧಿಕಾರದ ಹಕ್ಕು ನೀಡುವುದು.

೩. ಹಿಂದೂ ದತ್ತು ಮತ್ತು ಜೀವಾಂಶ ಕಾಯ್ದೆ(೧೯೫೬): ಈ ಕಾಯ್ದೆಯು ದತ್ತು ಮಕ್ಕಳನ್ನು ಪಡೆಯುವ ಹಕ್ಕನ್ನು ಮತ್ತು ಗಂಡನಿಂದ ನಿರಾಕರಣೆಗೊಂಡ ಅಥವಾ ಪರಿತ್ಯಕ್ತಳಾದ ಪತ್ನಿಗೆ ಆತನಿಂದ ಜೀವನಾಂಶ ಪಡೆಯುವ ಹಕ್ಕನ್ನು ನೀಡುತ್ತದೆ.

೪. ವಿಶೇಷ ವಿವಾಹ ಕಾಯ್ದೆ( ೧೯೫೪): ಅಂತರ್ಜಾತಿಯ ವಿವಾಹ, ಪ್ರೇಮ ವಿವಾಹ ಹಾಗೂ ವಿವಾಹದ ನೋಂದಣಿ ಇತ್ಯಾದಿಗಳಿಗೆ ಅವಕಾಶವಿರುವ ಈ ಕಾಯ್ದೆಯು ವೈವಾಹಿಕ ವಿಚಾರಗಳಲ್ಲಿ ಪುರುಷರಿಗೆ ಸಮಾನವಾದ ಹಕ್ಕುಗಳನ್ನು ಸ್ತ್ರೀಯರಿಗೂ ನೀಡುವುದು.

೫. ವರದಕ್ಷಿಣೆ ನಿಷೇಧ ಕಾಯ್ದೆ(೧೯೬೧): ಈ ಕಾಯ್ದೆಯಂತೆ ಸ್ತ್ರೀಯರ ಶೋಷಣೆಗೆ ಕಾರಣವಾದ ವರದಕ್ಷಿಣೆ ಪಿಡುಗನ್ನು ನಿಷೇಧಿಸಲಾಗಿದೆ.

೬. ಇತರ ಕಾಯ್ದೆಗಳು: ಮಹಿಳೆಯರಿಗೆ ಸಾಮಾಜಿಕ ರಕ್ಷಣೆ ನೀಡುವಲ್ಲಿ ಸಹಾಯಕವಾಗಿರುವ ಕಾಯ್ದೆಗಳಲ್ಲಿ ಈ ಕೆಳಗಿನವು ಉಲ್ಲೇಖವಾಗಿವೆ.

ಅ) ''ಕನ್ಯೆಯರ ಮತ್ತು ಮಹಿಳೆಯರ ಅನೈತಿಕ ವ್ಯವಹಾರ ಪ್ರತಿ ಬಂಧಕ ಕಾಯ್ದೆ'' (೧೯೫೬): ಸ್ತ್ರೀಯರ ಅಪಹರಣ ಮತ್ತು ವೇಶ್ಯಾವೃತ್ತಿಗೆ ಅವರನ್ನು ನೂಕುವುದನ್ನು ತಡೆಗಟ್ಟುವ ಕ್ರಮವನ್ನು ಕೈಗೊಳ್ಳಲಾಗಿದೆ.

ಆ) ''ವೈದ್ಯಕೀಯ ಗರ್ಭ ನಿವಾರಣಾ ಕಾಯ್ದೆ'' (೧೯೭೧): ಭ್ರೂಣ ಹತ್ಯೆಯನ್ನು ತಡೆಗಟ್ಟಲು ಶಾಸನ ಜಾರಿಗೆ ತರಲಾಗಿದೆ.

ಇ) ''ಅಪರಾಧ ಕಾನೂನು ತಿದ್ದುಪಡಿ ಕಾಯ್ದೆ'' (೧೯೮೩): ಸ್ತ್ರೀಯರ ಮೇಲಾಗುವ ಅತ್ಯಾಚಾರ - ಅನಾಚಾರಗಳನ್ನು ತಡೆಗಟ್ಟುವುದು.

ಈ) ''ಕುಟುಂಬದ ನ್ಯಾಯಾಲಯ ಕಾಯ್ದೆ'' (೧೯೮೪): ಕೌಟುಂಬಿಕ ವಿಚಾರಗಳಲ್ಲಿ ವಿವಾದಗಳಲ್ಲಿ ಸ್ತ್ರೀಯರಿಗೆ ನ್ಯಾಯವೊದಗಿಸಲು ಕ್ರಮ ಕೈಗೊಳ್ಳುವುದು.

## ಆ) ಮಹಿಳೆ ಮತ್ತು ಶಿಕ್ಷಣ:

ಶಿಕ್ಷಣವು ಮನುಷ್ಯನ ಬುದ್ಧಿ ಮತ್ತು ವ್ಯಕ್ತಿತ್ವದ ವಿಕಸನಕ್ಕೆ ಒದಗುವ ಸಾಧನವಾಗಿದೆ. ಅರಿವನ್ನು ವಿಸ್ತರಿಸಿಕೊಳ್ಳುವುದು ಮತ್ತು ಜೀವನದ ಮುಂದುವರಿಕೆಗಾಗಿ ಅವಶ್ಯಕವಿರುವ ಕೌಶಲ್ಯಗಳನ್ನು ತಿಳಿದುಕೊಳ್ಳುವುದು ಶಿಕ್ಷಣದ ಮುಖ್ಯ ಗುರಿಗಳಾಗಿವೆ. ಆದ್ದರಿಂದ ಸಮಾಜದ ಅಭಿವೃದ್ಧಿ ಪಥದಲ್ಲಿ ಜೀವನ ನಿರ್ವಹಣಾ ತರಬೇತಿಗಾಗಿ ಶಿಕ್ಷಣಕ್ಕೆ ಪ್ರಾಮುಖ್ಯತೆ ಇದೆ.

ಶಿಕ್ಷಣದಿಂದ ವಂಚಿತಗೊಳಿಸುವುದೆಂದರೆ ಬದುಕುವ ಹಕ್ಕನ್ನು ಕಸಿದುಕೊಂಡಂತೆ, ಜೀವನೋಪಾಯಕ್ಕೆ ತಡೆ ಒದಗಿಸಿದಂತೆ, ಶತಮಾನಗಳಿಂದ ಧರ್ಮ, ರೂಢಿ ಮತ್ತು ಸಂಪ್ರದಾಯಗಳ ಅರಿವು ಮಹಿಳೆಯರಿಗೆ ಅಲ್ಲವೆಂದು ಪ್ರಚಾರ ಮಾಡುತ್ತಾ ಬಂದಿವೆ. ಇದರ ಪರಿಣಾಮವಾಗಿ ಆಸಕ್ತ ಚಟುವಟಿಕೆ ಮತ್ತು ಸಾಧನಗಳ ವಿಚಾರವಾಗಿ ಸ್ತ್ರೀ ಪುರುಷರ ನಡುವೆ ಅಗಾಧ ವ್ಯತ್ಯಾಸಗಳು ಮೂಡಿ ಬಂದಿವೆ. ಇಂದು ಹೆಣ್ಣು ಎರಡನೆಯ ದರ್ಜೆಯವಳಾಗಿ ಗುರುತಿಸಿಕೊಳ್ಳುವುದಕ್ಕೆ ಶಿಕ್ಷಣದ ಕೊರತೆಯೇ ಕಾರಣವೆಂದು ಹೇಳಬಹುದು. ಪ್ರತಿಯೊಬ್ಬರಿಗೂ ಸಮಾನ ಶಿಕ್ಷಣ ನೀಡುವುದರ ಮೂಲಕ ಸಮಾಜದ ಲಿಂಗಭೇದ

ನೀತಿಯನ್ನು ಹೋಗಲಾಡಿಸುವುದು ಸಾಧ್ಯವೆಂದು ಮಹಿಳಾ ವಿಮೋಚನಕಾರರು ಅಭಿಪ್ರಾಯಪಟ್ಟಿದ್ದಾರೆ.

ಮಹಿಳೆಯರಿಗೆ ನೀಡುವ ಶಿಕ್ಷಣದ ಕುರಿತು ಪ್ರಮುಖವಾಗಿ ಎರಡು ವಾದಗಳು ಅಸ್ಥಿತ್ವದಲ್ಲಿವೆ. ''ಮಹಿಳೆಯರಿಗೆ ನೀಡುವ ಶಿಕ್ಷಣವು ಕುಟುಂಬ ಮತ್ತು ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ರೀತಿಯಲ್ಲಿ ಇರಬೇಕು ಎಂದು ಮೊದಲನೆಯ ವಾದ ತಿಳಿಸಿದರೆ, ಶಿಕ್ಷಣವು ಮಹಿಳೆಯರ ವ್ಯಕ್ತಿತ್ವ ವಿಕಸನಕ್ಕೆ ಅನುವು ಮಾಡಿಕೊಡುವಂತಿರಬೇಕು ಎಂದು ಎರಡನೆಯ ವಾದ ತಿಳಿಸುತ್ತದೆ'' [೨].

ಮಹಿಳೆಯರ ಬದುಕಿನಲ್ಲಿ ಶಿಕ್ಷಣವು ವಿಮೋಚನಾತ್ಮಕ ಮತ್ತು ಸಬಲೀಕರಣ ಪಾತ್ರವನ್ನು ನಿರ್ವಹಿಸುತ್ತದೆ ಎಂದು ತಿಳಿಯಬಹುದು. ಮನುಷ್ಯನ ಅದರಲ್ಲಿಯೂ ವಿಶೇಷವಾಗಿ ಮಹಿಳೆಯರ ಜೀವನ ಮಟ್ಟವು ಸುಧಾರಣೆ ಕಾಣಲು ಶಿಕ್ಷಣ ಅವಶ್ಯಕವಾಗಿದೆ. ಸುಶಿಕ್ಷಿತ ಮಹಿಳೆಯೊಬ್ಬಳು ತನ್ನ ಬದುಕಿನ ನಿರ್ವಹಣೆಗೆ ಸಾರ್ವಜನಿಕ ಕ್ಷೇತ್ರದ ಪ್ರವೇಶಾವಕಾಶವನ್ನು ಪಡೆಯುವಳಲ್ಲದೆ, ಅವಳ ವ್ಯಕ್ತಿತ್ವ ವಿಕಸನಕ್ಕೆ ಕೂಡಾ ಶಿಕ್ಷಣವು ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಮಹಿಳೆಯರ ಸ್ಥಾನವನ್ನು ಗುರುತಿಸಲು ಸಹಕಾರಿಯೆನಿಸುವ ಅನೇಕ ವಿಚಾರಗಳಲ್ಲಿ ಶಿಕ್ಷಣ ಕೂಡಾ ಒಂದು. ಈ ವಿಚಾರಗಳ ಹಿನ್ನೆಲೆಯಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹಿಳಾ ಶಿಕ್ಷಣವನ್ನು ಪ್ರಧಾನ ನೆಲೆಯಲ್ಲಿ ಪರಿಗಣಿಸುವ ಪ್ರಯತ್ನಗಳು ಸಮಾಜ ಸುಧಾರಕರಿಂದ ವಸಾಹತು ಆಡಳಿತಗಾರರಿಂದ, ಕ್ರೈಸ್ತ ಮಿಷನರಿಗಳಿಂದ ಮತ್ತು ಸ್ವಾತಂತ್ರ್ಯ ಹೋರಾಟಗಾರರಿಂದ ನಡೆದವು.

ಭಾರತೀಯ ಸಮಾಜ ಸುಧಾರಣೆಗೆ ಸ್ತ್ರೀ ಶಿಕ್ಷಣವು ಅಗತ್ಯವೆಂಬ ಭಾವನೆ ಸಮಾಜ ಸುಧಾರಕರಲ್ಲಿತ್ತು. ಸಾಮಾಜಿಕ ಪ್ರಗತಿಪರ ಕಾರ್ಯಯೋಜನೆಗಳು ಅರ್ಥಪೂರ್ಣವಾಗಲು ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡಬೇಕು. ಶಿಕ್ಷಣವು ಮಹಿಳೆಯರನ್ನು ಸಂಪ್ರದಾಯದ ಕಪಿಮುಷ್ಠಿಯಿಂದ ಮುಕ್ತಗೊಳಿಸುವುದಾಗಿದೆ. 'ದಯಾನಂದ ಸರಸ್ವತಿ' ಯವರು ಭಾರತೀಯ ಹೆಣ್ಣು ಮಕ್ಕಳನ್ನು ಆರ್ಯ ಮಾತೆಯರನ್ನಾಗಿ ರೂಪಿಸುವ ವಿದ್ಯಾಭ್ಯಾಸ ಕ್ರಮಗಳನ್ನು ಅನುಮೋದಿಸಿದರು.

ಲಾರ್ಡ್ ವಿಲಿಯಂ ಬೆಂಟಿಂಕ್ ಭಾರತದ ಗವರ್ನರ್ ಜನರಲ್ ಆಗಿ ಕ್ರಿ.ಶ.೧೮೨೮ರಲ್ಲಿ ಅಧಿಕಾರ ವಹಿಸಿಕೊಂಡ ನಂತರ ಸಾಕ್ಷರತಾ ಪ್ರಧಾನವಾದ ಸಾರ್ವತ್ರಿಕ

ಶಿಕ್ಷಣ ಪದ್ಧತಿ ಭಾರತದಲ್ಲಿ ಬಳಕೆಗೆ ಬಂದಿತು. ಆಡಳಿತಗಾರರಿಂದ ಪ್ರೋತ್ಸಾಹ ದೊರೆತ ಕಾರಣವಾಗಿ ಮಿಷನರಿಗಳು ಹಲವು ಶಾಲೆಗಳನ್ನು ಹೆಣ್ಣು ಮಕ್ಕಳಿಗಾಗಿ ಪ್ರಾರಂಭಿಸಿದರು.

೧೯೩೭ರಲ್ಲಿ ಗಾಂಧೀಜಿಯವರು ಪ್ರತಿಪಾದಸಿದ ಮೂಲಭೂತ ಶಿಕ್ಷಣ ವಿನ್ಯಾಸದಲ್ಲಿ ಎಲ್ಲಾ ಹೆಣ್ಣು ಮಕ್ಕಳೂ ಸೇರಿದಂತೆ ಏಳು ವರ್ಷಗಳ ಸಾರ್ವತ್ರಿಕ ಶಿಕ್ಷಣವು ಕಡ್ಡಾಯವಾಯಿತು. ಹೆಣ್ಣು ಮಕ್ಕಳಿಗೆ ಪ್ರತ್ಯೇಕ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಭಾರತದಲ್ಲಿ ಮಹಿಳಾ ಶಿಕ್ಷಣಕ್ಕೆ ಚಾಲನೆ ದೊರೆಯಿತು. ೧೮೨೪ರಲ್ಲಿ ಕ್ರಿಶ್ಚಿಯನ್ ಮಿಷನರಿಗಳಿಂದ ಮುಂಬೈಯಲ್ಲಿ ಹೆಣ್ಣು ಮಕ್ಕಳಿಗಾಗಿ ಶಾಲೆಯನ್ನು ತೆರೆಯಲಾಯಿತು. ೧೮೪೯ರಲ್ಲಿ ಜಾನ್‌ಟ್ರಿಂಕ್ ವಾಟರ್ ಬೆಥೂನ್ ಅವರು 'ಹಿಂದೂ ಬಾಲಿಕಾ ವಿದ್ಯಾಲಯ'ವನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಕಾರ್ಯದರ್ಶಿಯಾಗಿದ್ದವರು ಈಶ್ವರ ಚಂದ್ರ ವಿದ್ಯಾಸಾಗರವರು. ಮಹಾರಾಷ್ಟ್ರದಲ್ಲಿ ಜ್ಯೋತಿಭಾ ಪುಲೆಯವರು ೧೮೪೮ರಲ್ಲಿ ಕನ್ಯಾಶಾಲೆಯನ್ನು ಪ್ರಾರಂಭಿಸಿದರು. ಇವರೇ ೧೮೫೧ರಲ್ಲಿ ದಲಿತ ಮಹಿಳೆಯರಿಗಾಗಿ ಶಾಲೆಯನ್ನು ಪ್ರಾರಂಭಿಸಿದರು.

ಮೈಸೂರು ಸಂಸ್ಥಾನದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹಿಳಾ ಶಿಕ್ಷಣ ಪ್ರಾರಂಭವಾಯಿತು. ೧೮೩೩ರಲ್ಲಿ ಲಂಡನ್ ಮಿಷನರಿ ಸಂಸ್ಥೆ ಬಳ್ಳಾರಿಯಲ್ಲಿ ಹೆಣ್ಣು ಮಕ್ಕಳ ಶಾಲೆಯನ್ನು ಪ್ರಥಮವಾಗಿ ಪ್ರಾರಂಭಿಸಿತು.

೧೮೮೨ರಲ್ಲಿ ಲಾರ್ಡ್‌ರಿಪ್ಪನ್‌ರ ಸರಕಾರ ಮಹಿಳಾ ಶಿಕ್ಷಣವನ್ನು ಗಮನದಲ್ಲಿಟ್ಟು ಡಾ. ಡಬ್ಲ್ಯೂ ಹಂಟರ್‌ರ ನೇತೃತ್ವದಲ್ಲಿ ಶಿಕ್ಷಣ ಆಯೋಗವೊಂದನ್ನು ಸ್ಥಾಪಿಸಿತು. ಹೆಣ್ಣು ಮಕ್ಕಳಿಗೆ ಕಲಿಸುವ ಶಿಕ್ಷಣ ವ್ಯವಸ್ಥೆಯಲ್ಲಿ ಆಗಬೇಕಾಗಿರುವ ಸುಧಾರಣೆಗಳನ್ನು ಹಂಟರ್ ಆಯೋಗ ರಮಾಬಾಯಿಯವರನ್ನು ಕೇಳಿತು. ಇದಕ್ಕುತ್ತರವಾಗಿ ರಮಾಬಾಯಿಯವರು ಸ್ವಂತ ಭಾಷೆಯೊಂದಿಗೆ ಅವರು ಇಂಗ್ಲೀಷ್ ಭಾಷೆಯನ್ನು ತಿಳಿದುಕೊಂಡಿರಬೇಕು. ವಿವಾಹಿತೆ ಅಥವಾ ಅವಿವಾಹಿತೆ ಅಥವಾ ವಿಧವೆಯಾಗಿರಲಿ, ಅವರು ಕುಲೀನ ಮನೆತನದವರಾಗಿರಬೇಕು. ಪುರುಷರಿಗಿಂತ ಹೆಚ್ಚಿನ ವೇತನವನ್ನು ಅವರು ಪಡೆಯಬೇಕು. ವಿದ್ಯಾರ್ಥಿನಿಯರ ಶಾಲೆಗಳನ್ನು ಮಹಿಳೆಯರೇ ನಡೆಸುವಂತಿರಬೇಕು. ಮಹಿಳೆಯರಿಗೆ ವೈದ್ಯಕೀಯ ಕಲಿಯುವ ಅವಕಾಶವನ್ನು ಸರಕಾರ ಮಾಡಬೇಕು ಇತ್ಯಾದಿ ಕೆಲವು ವಿಚಾರಗಳನ್ನು ಹೇಳಿದರು.

ಶಾಲಾ ಮಟ್ಟದಲ್ಲಿ ಪ್ರಾರಂಭವಾದ ಮಹಿಳಾ ಶಿಕ್ಷಣ ಪರಂಪರೆಯು ಕ್ರಮೇಣ ಶಿಕ್ಷಕ ತರಬೇತಿ, ಪದವಿ ತರಗತಿಗಳನ್ನು ಹೊಂದಿರುವ ವಿದ್ಯಾಲಯಗಳ ಸ್ಥಾಪನೆಯ ಕಡೆಗೆ ಮುಖ ಮಾಡಿತು.

ಮಹಿಳೆಯರ ಉನ್ನತ ವ್ಯಾಸಂಗವನ್ನು ಗಮನದಲ್ಲಿಟ್ಟು ಮಹರ್ಷಿ ದೊಂಡೊ ಕೇಶವಕರ್ವೆಯರವರು ಪುಣೆ ಸಮೀಪದ ಹಿಂಗಣೆಯಲ್ಲಿ ಎಸ್.ಎನ್.ಡಿ.ಟಿ.ಯನ್ನು (ಶ್ರೀಮತಿ ನಾಥೀಬಾಯಿ ದಾಮೋದರ ಠಾಕರೆ ಭಾರತೀಯ ವಿದ್ಯಾಪೀಠ) ಸ್ಥಾಪಿಸಿದರು. ಡಾ॥ ಎಸ್.ರಾಧಾಕೃಷ್ಣನ್ ಅವರ ಅಧ್ಯಕ್ಷತೆಯಲ್ಲಿ ಭಾರತ ಸರಕಾರ ನೇಮಕ ಮಾಡಿದ ವಿಶ್ವವಿದ್ಯಾಲಯ ಶಿಕ್ಷಣ ಆಯೋಗವು ಸಾಮಾಜಿಕ ಚೌಕಟ್ಟಿನೊಳಗೆ ತಮ್ಮ ಪಾತ್ರವನ್ನು ನಿರ್ವಹಿಸಲು ಮಹಿಳೆಯರಿಗೆ ಅಗತ್ಯವೆನಿಸುವ ಕೆಲವು ವಿಶೇಷ ಪಠ್ಯಕ್ರಮಗಳನ್ನು ಶಿಫಾರಸು ಮಾಡಿತು. ಅವುಗಳೆಂದರೆ

೧. ಗೃಹ ಅರ್ಥಶಾಸ್ತ್ರ ಅಥವಾ ಗೃಹ ವಿಜ್ಞಾನ.

೨. ಶುಶ್ರೂಷೆ

೩. ಬೋಧನೆ

೪. ಲಲಿತ ಕಲೆಗಳು

ಪಂಚವಾರ್ಷಿಕ ಯೋಜನೆಗಳು ಮಹಿಳಾ ಶಿಕ್ಷಣ ಮಟ್ಟ ಸುಧಾರಣೆಗಾಗಿ ಹಲವಾರು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೧ - ೫೫) ಪ್ರಾಥಮಿಕ ಹಂತದಲ್ಲಿ ಬಾಲಕಿಯರ ದಾಖಲಾತಿಯನ್ನು ಉತ್ತಮ ಪಡಿಸಲು ಶಾಲಾ ಸೌಲಭ್ಯಗಳನ್ನು ಹೆಚ್ಚಿಸಲಾಯಿತು. ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೬-೬೧) ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ಶಿಕ್ಷಕಿಯರ ನೇಮಕಾತಿಯನ್ನು ನಡೆಸಲಾಯಿತು. ಗ್ರಾಮಾಂತರ ಪ್ರದೇಶದಲ್ಲಿ ಶಿಕ್ಷಕಿಯರಿಗೆ ಉಚಿತ ವಸತಿ ಸೌಕರ್ಯವನ್ನು ಪ್ರೌಢಶಾಲಾ ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಹಾಸ್ಟೆಲ್ ವ್ಯವಸ್ಥೆಯನ್ನು ಮಾಡಲಾಯಿತು. ಹಾಜರಾತಿ ವಿದ್ಯಾರ್ಥಿನಿಯರಿಗೆ ವೇತನ, ಶಾಲಾ ಶುಲ್ಕಗಳಲ್ಲಿ ಕಡಿತವನ್ನು ಪರಿಚಯಿಸಲಾಯಿತು. ಮೂರನೆಯ ಪಂಚವಾರ್ಷಿಕ ಯೋಜನೆಯು (೧೯೬೧-೬೬) ಹೆಣ್ಣು ಮಕ್ಕಳ ಮತ್ತು ಮಹಿಳೆಯರ ಶೈಕ್ಷಣಿಕ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ

ಕಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಹಂಸ ಮೆಹತಾ ಸಮಿತಿಯು ಬಾಲಕರ ಶಾಲೆಯಲ್ಲಿ ಶಿಕ್ಷಕಿಯರ ನೇಮಕಾತಿ ಮತ್ತು ಸಾಮಾನ್ಯ ಪಠ್ಯವಸ್ತು ಮತ್ತು ಗೃಹವಿಜ್ಞಾನ ಶಿಕ್ಷಣವು ಬಾಲಕ ಬಾಲಕಿಯರಿಗೆ ದೊರೆಯುವಂತೆ ಶಿಫಾರಸ್ಸು ಮಾಡಿತು. ನಾಲ್ಕನೆ ಯೋಜನೆಯು ಶಿಕ್ಷಣ ಪಡೆದ ಮಹಿಳೆಯರನ್ನು ದಕ್ಷ ತಾಯಿ ಪಾತ್ರ ನಿರ್ವಹಿಸಲು ನೆರವಾಗಬೇಕೆಂಬ ಅಂಶವನ್ನು ಸಮರ್ಥಿಸಿತು. ಐದನೆ ಯೋಜನೆಯಲ್ಲಿ (೧೯೭೫-೭೯) ಹೆಣ್ಣು ಮಕ್ಕಳ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕೆ ಹಲವಾರು ವಿದ್ಯಾರ್ಥಿ ವೇತನ, ಮಧ್ಯಾಹ್ನದ ಉಪಾಹಾರ, ಉಚಿತ ಸಮವಸ್ತ್ರ ನೀಡಲಾಯಿತು. ಆರನೆ ಪಂಚವಾರ್ಷಿಕ ಯೋಜನೆಯು ಶಾಲೆಯ ಹತ್ತಿರವೇ ಶಿಶು ಕೇಂದ್ರಗಳನ್ನು ತೆರೆಯಲಾಯಿತು. ಏಳನೆ ಯೋಜನೆಯು ಮಹಿಳೆಯರಿಗೆ ಶಿಕ್ಷಣವು ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಪೂರಕ ಅಂಶವಾಗಿ ಪರಿಣಮಿಸಬೇಕೆಂದು ಆಶಯ ಹೊಂದಿತ್ತು. 129941

ಕರ್ನಾಟಕ ಸರಕಾರವು ಮಹಿಳಾ ಶೈಕ್ಷಣಿಕ ಅಭಿವೃದ್ಧಿಗೆ ಹಲವಾರು ಕಾರ್ಯಕ್ರಮಗಳನ್ನು ೯ ರಿಂದ ೧೪ ವರ್ಷದ ಹೆಣ್ಣು ಮಕ್ಕಳಿಗೆ ಉಚಿತ ಶಿಕ್ಷಣ, ಉಚಿತ ಸಮವಸ್ತ್ರ, ಪಠ್ಯಪುಸ್ತಕ ಮತ್ತು ಶಾಲಾ ಸಲಕರಣೆಗಳ ವಿತರಣೆ, ಮಧ್ಯಾಹ್ನದ ಉಪಾಹಾರ, ಬಾಲಕಿಯರಿಗೆ ಹಾಜರಾತಿ. ಶಿಷ್ಯವೇತನ, ವಿದ್ಯಾರ್ಥಿ ವೇತನ, ವಸತಿ ಶಾಲೆ ಮತ್ತು ವಸತಿ ನಿಲಯಗಳು, ಬಾಲಿಕಾ ಸಂಮೃದ್ಧಿ ಯೋಜನೆ, ಮಹಿಳೆಯರಿಗಾಗಿ ಪ್ರತ್ಯೇಕ ಕೋರ್ಸ್‌ಗಳು ಮತ್ತು ತರಬೇತಿ ಇತ್ಯಾದಿಗಳನ್ನು ಹಮ್ಮಿಕೊಂಡಿದೆ. ಇದಕ್ಕೆ ಪೂರಕವಾಗಿ ಅಂಗನವಾಡಿ, ಶಿಶುಪಾಲನಾ ಕೇಂದ್ರಗಳ ಸೌಲಭ್ಯವನ್ನು ಒದಗಿಸಿದೆ.

ಈ ಹೊಸ ಅವಕಾಶಗಳನ್ನು ಬಳಸಿಕೊಳ್ಳುತ್ತಾ ಬಹುದೊಡ್ಡ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಉನ್ನತ ಶಿಕ್ಷಣದತ್ತ ಸಾಗುತ್ತಿದ್ದಾರೆ ಉದಾ:

೧. ''೧೯೫೧ರಲ್ಲಿ ಉನ್ನತ ಶಿಕ್ಷಣಕ್ಕೆ ಹೋಗುವ ಒಟ್ಟು ವಿದ್ಯಾರ್ಥಿಗಳಲ್ಲಿ ವಿದ್ಯಾರ್ಥಿನಿಯರ ಸಂಖ್ಯಾಪ್ರಮಾಣ ಶೇ. ೧೦.೯ರಷ್ಟಿದ್ದು ಇದು ೧೯೯೨ರಲ್ಲಿ ಶೇ.೩೨.೦ಕ್ಕೆ ಏರಿಕೆಯಾಗಿದೆ.

೨. ೨೦೦೪-೦೫ರ ಶೈಕ್ಷಣಿಕ ವರ್ಷದಲ್ಲಿ ದ್ವಿತೀಯ ಪಿ.ಯು.ಸಿ ಪರೀಕ್ಷೆಗೆ ಕುಳಿತಂತಹ ಕರ್ನಾಟಕದ ಒಟ್ಟು ೪.೭೨ ಲಕ್ಷ ವಿದ್ಯಾರ್ಥಿಗಳಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ೧.೯೮ ಲಕ್ಷದಷ್ಟಿದ್ದು, ಶೇ.೫೯.೭೯ರ ಉತ್ತೀರ್ಣತೆಯ ಫಲಿತಾಂಶ ಸಾಧಿಸಿ ೨.೭೩ ಲಕ್ಷದಷ್ಟಿದ್ದ ಬಾಲಕರನ್ನು ಹಿಂದಿಕ್ಕಿ (ಶೇ.೪೭.೬೯ ತೇರ್ಗಡೆ) ಮುಂದೆ ಸಾಗಿದ್ದಾರೆ'' [೩].

## ಇ) ಮಹಿಳೆ ಮತ್ತು ಉದ್ಯೋಗ

ಸಮಾಜದಲ್ಲಿ ಮಹಿಳೆಯರ ಜೀವನ ಮಟ್ಟವು ಸುಧಾರಣೆಯನ್ನು ಕಾಣಲು ಅವರ ಆರ್ಥಿಕ ಸಬಲೀಕರಣವು ಅತೀ ಮುಖ್ಯವಾಗಿದೆ. ಮಹಿಳೆಯರು ಮನೆಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸುವ ಮತ್ತು ತಮ್ಮ ಬಿಡುವಿನ ವೇಳೆಯಲ್ಲಿ ಕೈಕಸುಬುಗಳಲ್ಲಿ ತೊಡಗಿಸಿಕೊಳ್ಳುವುದು ಸಂಪ್ರದಾಯವೆನ್ನುವ ರೀತಿಯಲ್ಲಿ ಮುಂದುವರಿದು ಬಂದಿದೆ. ಕುಟುಂಬದ ಸದಸ್ಯರು ನಿರ್ವಹಿಸುವ ವಿವಿಧ ಕಾರ್ಯಗಳಿಗೆ ಸಹಾಯಕಿಯಾಗಿ ದುಡಿದು ತಮ್ಮ ದುಡಿಮೆಯನ್ನು 'ಅಗೋಚರ ನೆಲೆ'ಯಲ್ಲಿ ದಾಖಲಿಸುವ ಮಹಿಳೆಯರ ಸಂಖ್ಯೆ ಕಡಿಮೆಯೇನಿಲ್ಲ.

ಉದ್ಯೋಗರಂಗದಲ್ಲಿ ಎರಡು ವಿಭಿನ್ನ ಕ್ಷೇತ್ರಗಳು ಇವೆ. ಅವುಗಳೆಂದರೆ ೧.ಅಸಂಘಟಿತ ಕ್ಷೇತ್ರ ಮತ್ತು ೨. ಸಂಘಟಿತ ಕ್ಷೇತ್ರ. ನಗರ ಪ್ರದೇಶದ ಸುಶಿಕ್ಷಿತ ಮಹಿಳೆಯರು ಸಂಘಟಿತ ಕ್ಷೇತ್ರದಲ್ಲಿ ಕಾಣಿಸಿಕೊಂಡರೆ, ನಗರ ಹಾಗೂ ಗ್ರಾಮೀಣ ಎರಡೂ ಪ್ರದೇಶಗಳ ಮಹಿಳೆಯರು ಅಸಂಘಟಿತ ಕ್ಷೇತ್ರದಲ್ಲಿದ್ದಾರೆ.

### ಅಸಂಘಟಿತ ಕ್ಷೇತ್ರ:

ಅಸಂಘಟಿತ ಕ್ಷೇತ್ರವನ್ನು ರಕ್ಷಣೆಯಿಲ್ಲದ ಕ್ಷೇತ್ರವೆಂದು ಕೂಡಾ ಗುರುತಿಸಲಾಗಿದೆ. ಇಲ್ಲಿ ಸ್ವಉದ್ಯೋಗಿಗಳು ಮತ್ತು ಕೂಲಿ ಕಾರ್ಮಿಕರು ಎರಡು ರೀತಿಯ ಕೆಲಸಗಾರರಿದ್ದಾರೆ. ಕೃಷಿ ಅಥವಾ ಬೇಸಾಯ ಕಾರ್ಯಗಳನ್ನು ನಿರ್ವಹಿಸುವ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ತಮ್ಮ ಕುಟುಂಬಕ್ಕೆ ಸೇರಿದ ಭೂಮಿಯನ್ನು ಮನೆಯ ಇತರ ಸದಸ್ಯರ ಜೊತೆ ಮಹಿಳೆಯರು ಕೆಲಸ ಮಾಡುತ್ತಾರೆ. ಉಳುವುದು, ಬೀಜ ಬಿತ್ತುವುದು, ಬೆಳೆ ಕೊಯ್ಲು ಮತ್ತು ಮಾರುಕಟ್ಟೆಗೆ ತಲುಪಿಸುವ ಕಾರ್ಯಗಳನ್ನು ಪುರುಷರು ನಿರ್ವಹಿಸಿದರೆ; ಕಳೆ ಕೀಳುವುದು, ನಾಟಿ, ತೆನೆ ಬಡಿದು ಕಾಳು ಬೇರ್ಪಡಿಸಿ ಶುದ್ಧ ಮಾಡುವುದು ಮಹಿಳೆಯರ ಕೆಲಸ.

ಕೃಷಿ ಕಾರ್ಯವನ್ನು ಹೊರತು ಪಡಿಸಿ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ನಿರ್ವಹಿಸುವ ಅನೇಕ ಕಾರ್ಯ ಚಟುವಟಿಕೆಗಳು ಇವೆ. ಕುಂಬಾರಿಕೆ, ಕಮ್ಮಾರಿಕೆ, ನೇಯ್ಗೆ, ಚರ್ಮದ ಕೆಲಸ ಇತ್ಯಾದಿ. ಪ್ರಾಣಿ ಸಾಕಣೆ, ಹೈನುಗಾರಿಕೆ ಮೊದಲಾದವುಗಳು ಸೇರುತ್ತವೆ.

ಈ ಕ್ಷೇತ್ರದಲ್ಲಿಯೂ ಲಿಂಗಾಧಾರಿತ ಶ್ರಮವಿಭಜನೆಯನ್ನು ಕಾಣಬಹುದಾಗಿದೆ. ಉದಾ: ನೇಯ್ಗೆಯಲ್ಲಿ ನೂಲನ್ನು ಮಹಿಳೆ ತಯಾರಿಸಿದರೆ, ಮಗ್ಗವನ್ನುನಡೆಸುವವನು ಪುರುಷ. ಕುಂಬಾರಿಕೆಯಲ್ಲಿ ಮಣ್ಣನ್ನು ಕಲೆಸುವ ಕೆಲಸ ಮಹಿಳೆಯರದು. ಮಡಿಕೆ ತಯಾರಿಕೆ ಪುರುಷನದು.

ನಗರ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಕೆಲಸ ನಿರ್ವಹಿಸುವ ಸ್ವಉದ್ಯೋಗಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಇದ್ದಾರೆ. ಕಟ್ಟಡ ಕಾಮಗಾರಿ, ಬೀದಿ ಬದಿಯ ಮಾರಾಟ, ಮನೆಗೆಲಸಗಾರರಾಗಿ ಇರುವುದು. ಹಣ್ಣು, ತರಕಾರಿ, ಮೀನು, ಪ್ಲಾಸ್ಟಿಕ್ ವಸ್ತು ಹಾಗೂ ಬಟ್ಟೆಯ ಮಾರಾಟ ಮಾಡುವ ವ್ಯಾಪಾರಿ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ

ಅಸಂಘಟಿತ ಕ್ಷೇತ್ರದಲ್ಲಿರುವ ಎಲ್ಲಾ ಉದ್ಯೋಗಿ ಮಹಿಳೆಯರು ತಮ್ಮ ಮನೆಯ ಕೆಲಸದ ಜವಾಬ್ದಾರಿಯನ್ನು ಕೂಡ ನಿರ್ವಹಿಸಬೇಕಾಗುತ್ತದೆ. ಹೀಗಾಗಿ ಅವರ ಕೆಲಸದ ಅವಧಿಯು ದುಪ್ಪಟ್ಟಾಗಿದ್ದು, ಅವರು ಮಾಡುವ ಮನೆ ಕೆಲಸ ಕೂಲಿ ರಹಿತ ದುಡಿಮೆಯಾಗಿರುತ್ತದೆ. ಕಡಿಮೆ ಆದಾಯ, ಉದ್ಯೋಗದ ಭದ್ರತೆಯಿಲ್ಲದಿರುವುದು, ಮಾನಸಿಕ, ದೈಹಿಕ ಶೋಷಣೆ ಇವುಗಳು ಈ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಾಗಿವೆ.

**ಸಂಘಟಿತ ಕ್ಷೇತ್ರ:**

ಸಂಘಟಿತ ಕ್ಷೇತ್ರದಲ್ಲಿ ದುಡಿಯುವವರು ನಿಯಮಿತ ವೇತನವನ್ನು ಅಥವಾ ಸಂಬಳವನ್ನು ಪಡೆಯುತ್ತಾರೆ. ವೇತನವೆಂದರೆ ಶ್ರಮಕ್ಕೆ ಸಿಗುವ ಪ್ರತಿಫಲ. ಜನಗಣತಿ ಮತ್ತು ಸಮೀಕ್ಷೆಗಳು ವೇತನ ಪಡೆಯುವ ಉದ್ಯೋಗಿಗಳನ್ನು ದೃಷ್ಟಿಯಲ್ಲಿಟ್ಟು ಮಾಹಿತಿಯನ್ನು ಸಂಗ್ರಹ ಮಾಡುವುದರಿಂದ 'ಅಗೋಚರ ಕೈ'ಗಳ ಮಹಿಳೆಯರು ದಾಖಲೆಗಳಲ್ಲಿ ಕಾಣಸಿಗುವುದಿಲ್ಲ. ಪುರುಷರಿಗೆ ಹೋಲಿಸಿದರೆ ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ತುಂಬಾ ಕಡಿಮೆ.

ಒಂದು ಅಂದಾಜಿನ ಪ್ರಕಾರ ೧೯೯೬ರಲ್ಲಿ ೨,೬೧೦,೦೦೦ ಮಹಿಳೆಯರು ಸಾರ್ವಜನಿಕ ರಂಗದಲ್ಲಿ, ೧,೭೭೭,೨೦೦ ಮಹಿಳೆಯರು ಖಾಸಗಿ ರಂಗದಲ್ಲಿ ಉದ್ಯೋಗಿಗಳಾಗಿದ್ದರು. ಎಲ್ಲಾ ರೀತಿಯ ಉದ್ಯೋಗ ರಂಗಗಳನ್ನು ಗಣನೆಗೆ ತಂದುಕೊಂಡು ಮಹಿಳೆಯರ

ಸ್ಥಾನಮಾನದ ಅಧ್ಯಯನವನ್ನು ನಡೆಸಿದಾಗ ಮಹಿಳೆಯರು ಕಡಿಮೆ ವೇತನ ಬರುವ ಶ್ರೇಣೀಕರಣದಲ್ಲಿ ಕೆಳಮಟ್ಟದಲ್ಲಿರುವ ಉದ್ಯೋಗಗಳನ್ನು ನಿರ್ವಹಿಸುತ್ತಿರುವುದು ಕಂಡುಬಂದಿದೆ.

ಸ್ವಾತಂತ್ರ್ಯೋತ್ತರ ಅವಧಿಯ ಕೈಗಾರೀಕರಣ, ನಗರೀಕರಣ, ಶಿಕ್ಷಣ ಲಭ್ಯತೆ ಮತ್ತು ಸಂವಹನ ಜಾಲದ ಅಭಿವೃದ್ಧಿ ಮೊದಲಾದವುಗಳು ಉದ್ಯೋಗ ಸೇರಲು ಮಹಿಳೆಯರಿಗೆ ಮುಖ್ಯ ಪ್ರೇರಣೆಯಾದವು. ಇಂದು ಆರ್ಥಿಕ ಸುಭದ್ರತೆಯನ್ನು ನೀಡುವ ಹಲವು ಹತ್ತು ನವೀನ ಕ್ಷೇತ್ರಗಳನ್ನು ಆಯ್ದುಕೊಂಡು ಮಹಿಳೆಯರು ಕಾರ್ಯನಿರ್ವಹಿಸುತ್ತಿದ್ದಾರೆ.

ಜೈವಿಕ ಸ್ವರೂಪವನ್ನು ಗಣನೆಗೆ ತಂದುಕೊಳ್ಳದೆ ಎಲ್ಲಾ ಉದ್ಯೋಗಗಳು ಎಲ್ಲರಿಗೂ ದೊರೆಯುವಂತಿರಬೇಕು ಎಂಬ ಕಲ್ಪನೆಯು ಇಂದು ನಿಜವಾಗಿದೆ. ಹಿಂದೆ ಪುರುಷ ಸ್ವಾಮ್ಯಕ್ಕೆ ಒಳಪಟ್ಟಂತಿದ್ದ ಉದ್ಯೋಗಗಳಿಗೆ ಮಹಿಳೆಯರು ಪ್ರವೇಶ ಪಡೆದಿದ್ದಾರೆ. ವೈದ್ಯರಾಗಿ, ಶಸ್ತ್ರ ಚಿಕಿತ್ಸಕರಾಗಿ, ಆಡಳಿತಗಾರರಾಗಿ ಅವರು  ಕಾರ್ಯ ನಿರ್ವಹಿಸುತ್ತಿದ್ದಾರೆ. ವಿಮಾನ ಚಾಲಕರಾಗಿ, ಸೇನಾ ಪಡೆಯ ಮುಖ್ಯಸ್ಥರಾಗಿ, ವಿಜ್ಞಾನಿಗಳಾಗಿ, ವಿಶ್ವವಿದ್ಯಾಲಯಗಳ ಕುಲಪತಿಗಳಾಗಿ, ಪೊಲೀಸ್ ಪಡೆಯ ಉನ್ನತ ಅಧಿಕಾರಿಗಳಾಗಿ, ಬಸ್ ಕಂಡಕ್ಟರ್, ಆಟೋ ಡ್ರೈವರ್ ಆಗಿ ಮಹಿಳೆಯರು ಸಮರ್ಥ ರೀತಿಯಲ್ಲಿ ತಮ್ಮ ಉದ್ಯೋಗವನ್ನು ನಡೆಸುತ್ತಿದ್ದಾರೆ. ಇತ್ತೀಚಿನ ಜಾಗತೀಕರಣದಲ್ಲಿ ಐಟಿ-ಬಿಟಿ ಹಾಗೂ ಕೈಗಾರಿಕ ಕ್ಷೇತ್ರಗಳಲ್ಲಿಯೂ ಕೂಡ ತಮ್ಮದೇ ಆದ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಸುಶಿಕ್ಷಿತ ಮಹಿಳೆಯರು ಕುಟುಂಬದ ನಿರ್ವಹಣೆಯೊಂದಿಗೆ ತಮ್ಮ ವೃತ್ತಿಪರ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಳ್ಳುತ್ತಿದ್ದಾರೆ. ಕುಟುಂಬದ ಪುರುಷ ಸದಸ್ಯರು ಕೂಡಾ ಮಹಿಳೆಯರ ಉದ್ಯೋಗವನ್ನು ಸಾಮಾಜಿಕ ಸ್ಥಾನಮಾನಗಳಿಗೆ ಪೂರಕವೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ಆರ್ಥಿಕ ಸ್ವಾತಂತ್ರ್ಯವು ಮಹಿಳೆಯರಿಗೆ ಅನನ್ಯತೆಯನ್ನು, ಕುಟುಂಬದಲ್ಲಿ ಗೌರವದ ಸ್ಥಾನವನ್ನು ಕಲ್ಪಿಸಿದೆ.

ಸ್ತ್ರೀಯರ ಆರ್ಥಿಕ ಹಾಗೂ ಉದ್ಯೋಗ ಸಂಬಂಧಿ ಆಸಕ್ತಿಗಳನ್ನು ಕಾಪಾಡುವ ದೃಷ್ಟಿಯಿಂದ ಕೆಲವು ಶಾಸನಗಳನ್ನು ಕೈಗೊಳ್ಳಲಾಗಿದೆ. ಉದಾ:

೧. 'ಪ್ರಸೂತಿಕಾ ಸೌಲಭ್ಯ ಕಾಯ್ದೆ' (೧೯೬೧): ದುಡಿಯುವ  ವಿವಾಹಿತ ಮಹಿಳೆಯರಿಗೆ

ಹೆರಿಗೆ ಸಂಬಂಧವಾಗಿ ಸಂಬಳ ಸಹಿತ ರಜೆ ಪಡೆಯುವ ಸೌಲಭ್ಯವಿದೆ.

೨. 'ಸಮಾನ ವೇತನ ಕಾಯ್ದೆ' (೧೯೭೬): ಸಮಾನ ಕೆಲಸಕ್ಕೆ ಸಮಾನ ವೇತನವೆಂಬ ತತ್ವವನ್ನು ಅನುಷ್ಠಾನಗೊಳಿಸಲಾಗಿದೆ.

೩. 'ಕಾರ್ಖಾನೆ (ತಿದ್ದುಪಡಿ)ಕಾಯ್ದೆ' (೧೯೭೬): ಉಳಿದ ಅನುಕೂಲತೆಗಳ ಜೊತೆಗೆ ಕಾರ್ಖಾನೆಗಳು ಸ್ತ್ರೀಯರಿಗಾಗಿ ಪ್ರತ್ಯೇಕ ಶೌಚಗೃಹಗಳನ್ನು ವಿಶ್ರಾಂತಿ ಕೊಠಡಿಗಳನ್ನು ಏರ್ಪಡಿಸಬೇಕಾಗುವುದು. ತಾಯಂದಿರ ದುಡಿಮೆಯ ಅವಧಿಯಲ್ಲಿ ಅವರ ಮಕ್ಕಳ ಸಂರಕ್ಷಣೆಗೂ ವ್ಯವಸ್ಥೆ ಮಾಡಬೇಕಾಗುವುದು.

## ಈ) ಮಹಿಳೆ ಮತ್ತು ರಾಜಕಾರಣ:

ಭಾರತದ ಸಂವಿಧಾನವು ಮಹಿಳೆಯರಿಗೆ ಸಮಾನತೆಯನ್ನು ನೀಡಿ ಗೌರವಿಸಿದೆ. ಸಂವಿಧಾನದ ಕೆಳಕಂಡ ನಿಯಮಗಳು ಪುರುಷರು ಹಾಗೂ ಮಹಿಳೆಯರ ನಡುವಿನ ಸಮಾನತೆಯನ್ನು ಎತ್ತಿ ಹಿಡಿಯುತ್ತದೆ.

★ ಸಂವಿಧಾನದ ೧೪ನೇ ವಿಧಿ ಅನ್ವಯ (ಪರಿಚ್ಛೇದ) ಕಾನೂನಿನ ಮುಂದೆ ಎಲ್ಲರೂ ಸಮಾನರು.

★ ೧೫(೧) ವಿಧಿ ಪ್ರಕಾರ ಲಿಂಗ ಆಧಾರದ ಮೇಲೆ ರಾಜ್ಯವು ತಾರತಮ್ಯವನ್ನು ಮಾಡುವಂತಿಲ್ಲ.

★ ೧೬(೨) ವಿಧಿಯ ಪ್ರಕಾರ ಸಾರ್ವಜನಿಕರ ಸೇವೆಗಳಲ್ಲಿ ಅವಕಾಶ ಪಡೆದಿದ್ದಾರೆ.

★ ೨೩ ಮತ್ತು ೨೪ನೇ ವಿಧಿಗಳ ಪ್ರಕಾರ ಶೋಷಣೆ ವಿರುದ್ಧ ಹಕ್ಕನ್ನು ಪಡೆದಿದ್ದಾರೆ.

★ ೩೨೦ನೇ ವಿಧಿಯು ಅನ್ವಯು ೧೮ ವರ್ಷ ತುಂಬಿದ ಮಹಿಳೆಯರು ಮತದಾರರಾಗಬಹುದು. ೮೪ನೇ ವಿಧಿಯ ಅನ್ವಯ ೨೫ ವರ್ಷ ತುಂಬಿದ ಭಾರತೀಯ ಮಹಿಳೆ ಲೋಕಸಭೆಗೂ ಮತ್ತು ೩೦ ವರ್ಷ ತುಂಬಿದ ಮಹಿಳೆ ರಾಜ್ಯ ಸಭೆಗೂ ಆಯ್ಕೆಯಾಗಲು ಅರ್ಹತೆ ಪಡೆದಿದ್ದಾಳೆ. ಅದೇ ರೀತಿ೧೭೩ನೇ ವಿಧಿ ಪ್ರಕಾರ ೨೫ ವರ್ಷ ತುಂಬಿದ ಮಹಿಳೆ ರಾಜ್ಯದ ವಿಧಾನ ಸಭೆ ಮತ್ತು ೩೦ ವರ್ಷ ತುಂಬಿದ ಮಹಿಳೆ ವಿಧಾನ ಪರಿಷತ್ ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲಲು ಹಕ್ಕನ್ನು ಪಡೆದಿದ್ದಾಳೆ.

★ ಸಂವಿಧಾನದ ೨೪೩ ಡಿ ವಿಧಿಯ (೩)ನೇ ಉಪವಿಧಿ ಅನ್ವಯ, ೧/೩ ಸ್ಥಾನಗಳನ್ನು ಪ್ರತಿಯೊಂದು ಹಂತದ ಪಂಚಾಯತ್ ಸಂಸ್ಥೆಯಲ್ಲಿ ಮೀಸಲಿಡಬೇಕು. (೪)ನೇ ಉಪವಿಧಿ ಪ್ರಕಾರ ಪ್ರತಿಯೊಂದು ಹಂತದ ಪಂಚಾಯತ್ ೧/೩ ರಷ್ಟು ಅಧ್ಯಕ್ಷ ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು[೪].

ರಾಜಕಾರಣದಲ್ಲಿ ಭಾಗವಹಿಸಲು ಸಂವಿಧಾನವು ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ನೀಡಿದ್ದರೂ, ಅದನ್ನು ಅನುಭವಿಸಲು ಮಹಿಳೆಯರಿಗೆ ಸಾಧ್ಯವಾಗಿಲ್ಲ. ಸಮಾಜದ ಎಲ್ಲಾ ಕ್ಷೇತ್ರಗಳು ಪುರುಷ ಪ್ರಧಾನವಾಗಿರುವಂತೆ, ರಾಜಕೀಯ ಕ್ಷೇತ್ರವೂ ಪುರುಷರ ಅಖಾಡವಾಗಿದೆ. ಮಹಿಳೆಯರ ರಾಜಕೀಯ ಪ್ರಾತಿನಿಧ್ಯತೆ ಬಗ್ಗೆ ರಾಜಕೀಯ ಪಕ್ಷಗಳ ನಿರಾಸಕ್ತಿ, 'ರಾಜಕೀಯ ಕ್ಷೇತ್ರವು ಪುರುಷರಿಗೆ ಮಾತ್ರ' ಎಂಬ ಭಾವನೆ ಮಹಿಳೆಯರಲ್ಲಿರುವುದು, ಕಲುಷಿತಗೊಂಡಿರುವ ರಾಜಕಾರಣ ಹಾಗೂ ರಾಜಕಾರಣದಲ್ಲಿ ಮಹಿಳೆಯರು ಭಾಗವಹಿಸಲು ಅಶಕ್ತರೆಂದು ಬಹುತೇಕ ಮಹಿಳೆಯರು ಹಾಗೂ ಪುರುಷರಲ್ಲಿರುವ ತಪ್ಪು ಗ್ರಹಿಕೆ ಇಂತಹ ರಾಜಕೀಯ ಅಸಮಾನತೆಗೆ ಮುಖ್ಯ ಕಾರಣಗಳಾಗಿವೆ. ೧೯೫೧ ರಿಂದ ೨೦೦೭ರವರೆಗ ಸಂಸತ್ತು ಮತ್ತು ರಾಜ್ಯ ಶಾಸಕಾಂಗಗಳಿಗೆ ಆಯ್ಕೆಯಾಗಿರುವ ಮಹಿಳಾ ಸದಸ್ಯರ ಸಂಖ್ಯೆ ಬಹಳ ಕಡಿಮೆ.

## ಲೋಕಸಭೆ (ಸಂಸತ್ತಿನ ಮೊದಲ ಸದನ)

| ಚುನಾವಣೆ ವರ್ಷ | ಒಟ್ಟು ಸ್ಥಾನಗಳು | ಚುನಾವಣೆಗಳಲ್ಲಿ ಸ್ಪರ್ಧಿಸಿದ್ದ ಮಹಿಳೆಯರು | ಮಹಿಳೆಯರು ಗೆದ್ದ ಸ್ಥಾನಗಳು | ಶೇಖಡವಾರು ಪ್ರಾತಿನಿಧ್ಯತೆ |
|---|---|---|---|---|
| ೧೯೫೧-೫೨ | ೪೮೯ | ೫೧ | ೨೨ | ೪.೪೦ |
| ೧೯೫೭ | ೫೦೦ | ೭೦ | ೨೭ | ೫.೪೦ |
| ೧೯೬೨ | ೫೦೩ | ೬೮ | ೩೪ | ೬.೭೦ |
| ೧೯೬೭ | ೫೨೩ | ೬೬ | ೩೧ | ೫.೯೦ |
| ೧೯೭೧ | ೫೨೧ | ೮೬ | ೨೨ | ೪.೨೦ |

| ೧೯೭೭ | ೫೪೪ | ೭೦ | ೧೯ | ೩.೪೦ |
|---|---|---|---|---|
| ೧೯೮೦ | ೫೪೪ | ೧೪೨ | ೨೮ | ೫.೧೪ |
| ೧೯೮೪ | ೫೪೪ | ೪೨೧ | ೪೪ | ೭.೯೦ |
| ೧೯೮೯ | ೫೨೫ | ೧೮೯ | ೨೭ | ೫.೩೦ |
| ೧೯೯೧ | ೫೦೩ | ೩೦೭ | ೩೯ | ೬.೬೦ |
| ೧೯೯೬ | ೫೪೩ | ೪೭೭ | ೪೦ | ೭.೧೮ |
| ೧೯೯೮ | ೫೪೩ | ೨೫೨ | ೪೩ | ೭.೨೦ |
| ೧೯೯೯ | ೫೪೩ | ೨೫೨ | ೪೭ | ೯.೦೭ |
| ೨೦೦೪ | ೫೪೩ | ೨೫೨ | ೪೮ | ೮.೩೦ |

೨೦೦೬ರಲ್ಲಿ ಗ್ಲೋಬಲ್ ಜೆಂಡರ್ ಎಂಬ ಅಂತರರಾಷ್ಟ್ರೀಯ ಸಂಸ್ಥೆ ೧೧೫ ದೇಶಗಳ ಆರ್ಥಿಕ ಮತ್ತು ರಾಜಕೀಯ ಪ್ರಗತಿಯನ್ನು ಅಧ್ಯಯನ ಮಾಡಿ ಒಂದು ವರದಿಯನ್ನು ಸಿದ್ಧಪಡಿಸಿತು. ಇದರ ಪ್ರಕಾರ ಭಾರತದ ಸಂಸತ್ತಿನಲ್ಲಿ ಮಹಿಳೆಯರ ಪ್ರಾತಿನಿಧ್ಯತೆ ಶೇ.೮ರಷ್ಟು ಮತ್ತು ಕೇಂದ್ರದ ಮಂತ್ರಿಮಂಡಲದಲ್ಲಿ ಮಹಿಳಾ ಸಚಿವರ ಸಂಖ್ಯೆ ಶೇ.೩ರಷ್ಟಿತ್ತು. ಅಲ್ಲದೆ ಮಹಿಳೆಯರ ರಾಜಕೀಯ ಶಕ್ತೀಕರಣದಲ್ಲಿ ಭಾರತ ೨೦ನೇ ಸ್ಥಾನವನ್ನು ಪಡೆಯಿತು. ಶ್ರೀಲಂಕಾ ಏಳನೇ ಸ್ಥಾನವನ್ನು, ಬಾಂಗ್ಲಾದೇಶ ಹದಿನೇಳನೇ ಸ್ಥಾನವನ್ನು ಪಡೆದು ಭಾರತಕ್ಕಿಂತ ಮುಂಚೂಣಿಯಲ್ಲಿದ್ದವು.

ವಾಸ್ತವದಲ್ಲಿ ಯಾವುದೇ ಪಕ್ಷ ಚುನಾವಣೆಯ ಟಿಕೇಟ್ ಹಂಚಿಕೆಯಲ್ಲಿ ಕುಲ ಮತ್ತು ಹಣವನ್ನು ಅಳತೆಗೋಲನ್ನಾಗಿಸಿಕೊಳ್ಳುತ್ತದೆ. ಅದೇ ಸಂದರ್ಭದಲ್ಲಿ ಅನುಕಂಪ ಪ್ರೇರಿತ ಮತಗಳು ಬರುವಂತಿದ್ದರೆ ಪುರುಷ ರಾಜಕಾರಣಿ ಸತ್ತ ಮನೆಯಿಂದ ಮಹಿಳೆಯನ್ನು ಚುನಾವಣಾ ಕಣಕ್ಕೆ ಒತ್ತಾಯ ಪೂರಕವಾಗಿಯೂ ಕರೆತರಲಾಗುತ್ತದೆ. ರಾಜಕಾರಣವೆಂಬುದು ಒಂದು ಉದ್ಯಮವಾಗಿರುವುದರಿಂದ ಲಾಭನಷ್ಟದ ಪ್ರಶ್ನೆ - ಉತ್ತರಗಳಿಗೆ ಗಂಡಸೇ ಬಾಧ್ಯಸ್ಥನಾಗಿರುವುದರಿಂದ ರಾಜಕೀಯ ಕ್ಷೇತ್ರವೆಲ್ಲ ಪುರುಷಮಯವಾಗಿದೆ.

ಭಾರತದಲ್ಲಿ ಅನೇಕ ಮಹಿಳೆಯರು ರಾಜಕಾರಣದಲ್ಲಿ ತಮ್ಮದೇ ಪಾತ್ರವನ್ನು ಬೀರಿದ್ದಾರೆ. ''ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್, ಸರೋಜಿನಿ ನಾಯಡು, ತಾರಾಕೇಶ್ವರಿ ಸಿನ್ಹಾ, ನಜ್ಮ ಹೆಪ್ತುಲ್ಲಾ, ಸುಷ್ಮಸ್ವರಾಜ್, ಜಯಂತಿ ಪಾಟ್ನಾಯಕ್, ಮಾರ್ಗರೇಟ್ ಆಳ್ವಾ, ರೇಣುಕಾ ಚೌಧರಿ, ಬೃಂದ ಕಾರಟ್, ಜಯಾಬಚ್ಚನ್, ಜಯಪ್ರದ, ಮೇನಕಗಾಂಧಿ, ಜಯಂತಿ ನಟರಾಜನ್, ಮಮತಾ ಬ್ಯಾನರ್ಜಿ, ಸೋನಿಯಾಗಾಂಧಿ, ಗಿರಿಜಾ ವ್ಯಾಸ್ ಮುಂತಾದವರು ರಾಷ್ಟ್ರ ರಾಜಕಾರಣದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ''[೫].

ಕರ್ನಾಟಕದ ರಾಜಕಾರಣದಲ್ಲಿ ಮಹಿಳೆಯರ ಪಾತ್ರವನ್ನು ಅವಲೋಕಿಸೋಣ. ಐತಿಹಾಸಿಕವಾಗಿ ಕಿತ್ತೂರು ಚೆನ್ನಮ್ಮ, ಕೆಳದಿ ಚೆನ್ನಮ್ಮ, ರಾಣಿ ಅಬ್ಬಕ್ಕದೇವಿ, ಬೆಳವಾಡಿಯ ಮಲ್ಲವ್ವ, ಮಹಾರಾಣಿ ಲಕ್ಷಮ್ಮಣ್ಣಿ ಇವರೆಲ್ಲಾ ಆಡಳಿತ ಸೂತ್ರ ಹಿಡಿದವರು. ಇನ್ನೂ ಸ್ವಾಂತಂತ್ರ್ಯ ಹೋರಾಟದ ಚಳುವಳಿಯಲ್ಲಿ ಯಶೋಧರಮ್ಮ, ದಾಸಪ್ಪ, ಟಿ.ಸುನಂದಮ್ಮ, ಬಳ್ಳಾರಿ ಸಿದ್ದಮ್ಮ, ಸುಬ್ಬಮ್ಮ ಜೋಯಿಸ್, ಇಂದಿರಾ ಕೃಷ್ಣಮೂರ್ತಿ ಮುಂತಾದವರು ಭಾಗವಹಿಸಿದ್ದರು. ಸ್ವಾತಂತ್ರ ನಂತರ ನಾಗರತ್ನಮ್ಮರವರು ವಿಧಾನ ಸಭೆಯ ಸ್ಪೀಕರ್‌ರಾಗಿದ್ದರು. ಮನೋರಮ ಮಧ್ವರಾಜ್, ಲೀಲಾವತಿ ಆರ್.ಪ್ರಸಾದ್, ಮಾರ್ಗರೇಟ್ ಆಳ್ವ, ಬಿ.ಟಿ.ಲಲಿತಾ ನಾಯಕ್, ಮೋಟಮ್ಮ, ರಾಣಿ ಸತೀಶ್, ವಿಮಲಾ ದೇಶಪಾಂಡೆ, ಶಕುಂತಳಾ ಶೆಟ್ಟಿ ಕೂಡ ಸಚಿವರಾಗಿ ತಮ್ಮ ಖಾತೆಗಳನ್ನು ದಕ್ಷತೆಯಿಂದ ನಿರ್ವಹಿಸಿದರು. ಪ್ರಮೀಳ ನೇಸರ್ಗಿ ಕರ್ನಾಟಕದ ಮಹಿಳಾ ಆಯೋಗದ ಅಧ್ಯಕ್ಷರಾಗಿ ೨೦೦೭ರಲ್ಲಿ ನೇಮಕಗೊಂಡು ದಕ್ಷತೆಯಿಂದ ಕೆಲಸ ನಿರ್ವಹಿಸಿರುವರು. ಶಾಸಕರಾಗಿ ಶ್ರೀಮತಿ ಸುನೀತ ವೀರಪ್ಪಗೌಡ, ಶ್ರೀಮತಿ ಪರಿಮಳ ನಾಗಪ್ಪ, ಶ್ರೀಮತಿ ನಾಗಮಣಿ ನಾಗೇಗೌಡ, ಶ್ರೀಮತಿ ವಿಜಯಲಕ್ಷ್ಮಿ ಬಂಡಿಸಿದ್ದೇಗೌಡ, ಲೀಲಮ್ಮ ಶಿವನಂಜಪ್ಪ ಮುಂತಾದರವರು ಅಭಿವೃದ್ಧಿ ಕೆಲಸಗಳಿಗೆ ಗಮನ ನೀಡಿದರು. ಶೋಭಾ ಕರಂದ್ಲಾಜೆ ಈಗಿನ ಸಚಿವರಾಗಿದ್ದಾರೆ.

ರಾಜ್ಯದ ರಾಜಕಾರಣದಲ್ಲಿ ಬಹುತೇಕ ಮಹಿಳೆಯರು ಶಾಸನ ಸಭೆಯ ಸದಸ್ಯರಾಗಿ ಸಚಿವರಾಗಿ ಮತ್ತು ವಿವಿಧ ಸಮಿತಿಗಳಲ್ಲಿ ಭಾಗವಹಿಸಿ ತಮ್ಮ ರಾಜಕೀಯ ಜವಾಬ್ದಾರಿಯನ್ನು ಕಾನೂನು ಬದ್ಧವಾಗಿ ನಿರ್ವಹಿಸಿದ್ದಾರೆ. ಆದ್ದರಿಂದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಭಾಗವಹಿಸುವಂತೆ ರಾಜಕೀಯ ಪಕ್ಷಗಳು ಬೆಂಬಲ ಕೊಡಬೇಕು. ಸಚಿವ ಸಂಪುಟದಲ್ಲಿ ಹೆಚ್ಚಿನ ಪ್ರಾತಿನಿಧ್ಯತೆ ನೀಡಬೇಕು. ಇದರಿಂದ ಪ್ರಜಾಪ್ರಭುತ್ವ ಬಲವರ್ಧನೆಯಾಗುತ್ತದೆ

ಮತ್ತು ಪುರುಷ ಮಹಿಳೆ ನಡುವೆ ಸಮಾನತೆ ಉಂಟಾಗುತ್ತದೆ.

### ಉ) ಮಹಿಳೆ, ಮಾಹಿತಿ ತಂತ್ರಜ್ಞಾನ ಮತ್ತು ಜಾಗತೀಕರಣ:

ಕಳೆದ ಮೂರು ದಶಕಗಳಲ್ಲಿ ತಂತ್ರಜ್ಞಾನ ಕ್ಷೇತ್ರದಲ್ಲಿ ಅತ್ಯದ್ಭುತ ಬದಲಾವಣೆಗಳಾಗಿವೆ. ಅದರಲ್ಲೂ ಮಾಹಿತಿ ಮತ್ತು ಸಂವಹನ ಕ್ಷೇತ್ರದಲ್ಲಿ ವಿಶ್ವದಾದ್ಯಂತ ಒಂದು ಕ್ರಾಂತಿಯೇ ನಡೆದಿದೆ. ಈ ಕ್ರಾಂತಿಯನ್ನು ಕೈಗಾರಿಕಾ ಕ್ರಾಂತಿಗೆ ಹೋಲಿಸಿ, ಇದು ಎರಡನೆಯ ಕ್ರಾಂತಿ ಎಂದು ಹೇಳಲಾಗುತ್ತಿದೆ. ಮಾಹಿತಿ - ಕ್ರಾಂತಿ ಆಧಾರಿತ ಜಾಗತೀಕರಣ, ಶ್ರೀಮಂತ ಮತ್ತು ಬಡರಾಷ್ಟ್ರಗಳ ನಡುವೆ ಮತ್ತು ರಾಷ್ಟ್ರದೊಳಗೆ ವಿವಿಧ ವರ್ಗಗಳ ನಡುವೆ ಆರ್ಥಿಕ ಅಸಮಾನತೆಯನ್ನು ತೀವ್ರಗೊಳಿಸುತ್ತದೆ. ವಾಸ್ತವವಾಗಿ ಈ ಕ್ರಾಂತಿಯ ಕಕ್ಷೆಯೊಳಗೆ ಬರುತ್ತಿರುವವರ ಸಂಖ್ಯೆ ಬಹಳ ಕಡಿಮೆಯಿದ್ದು ಹೊರಗುಳಿದವರ ಪರಿಸ್ಥಿತಿ ಗಂಭೀರಗೊಳ್ಳುತ್ತಿದೆ. ಮುಖ್ಯವಾಗಿ ಮಹಿಳೆಯರ ಮೇಲೆ ಇದರ ಪರಿಣಾಮ ತೀವ್ರವಾಗಿದೆ.

ಮಾಹಿತಿ ತಂತ್ರಜ್ಞಾನ ಮಹಿಳೆಯರನ್ನು ಸಬಲೀಕರಣಗೊಳಿಸಬಲ್ಲುದೇ? ಅವರ ಅಭಿವೃದ್ಧಿಯನ್ನು ಅದು ಪೋಷಿಸಬಲ್ಲುದೇ ಎನ್ನುವ ಪ್ರಶ್ನೆ ಪದೇ ಪದೇ ಎಲ್ಲರನ್ನು ಕಾಡುತ್ತಿದೆ. ಈ ಪ್ರಶ್ನೆಗೆ ಉತ್ತರಿಸಬೇಕಾದರೆ, ಜಾಗತೀಕರಣ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಬೇಕು.

ಜಾಗತೀಕರಣ ಮುಖ್ಯವಾಗಿ ರಾಷ್ಟ್ರ ರಾಷ್ಟ್ರಗಳ ನಡುವೆ ಮುಕ್ತ ವ್ಯಾಪಾರ ಏರ್ಪಡಬೇಕೆಂದು ಪ್ರತಿಪಾದಿಸುತ್ತದೆ. ಕಳೆದ ಮೂರು ದಶಕಗಳಲ್ಲಿ ಜಾಗತೀಕರಣದಿಂದಾಗಿ ಕೆಲವು ರಾಷ್ಟ್ರಗಳಿಗೆ ಲಾಭವಾಗಿದೆ. ಆದರೆ, ವಿಶ್ವದ ಅಭಿವೃದ್ಧಿಶೀಲ ರಾಷ್ಟ್ರಗಳು ಜಾಗತೀಕರಣ ಪ್ರಕ್ರಿಯೆಯನ್ನು ಇನ್ನೂ ಗುಮಾನಿಯಿಂದಲೇ ನೋಡುತ್ತಿವೆ. '' 'ಸ್ಟಿಗ್ಲಿಜ್' ಎಂಬ ನೋಬೆಲ್ ಪ್ರಶಸ್ತಿ ವಿಜೇತ ಅರ್ಥಶಾಸ್ತ್ರಜ್ಞನ ಪ್ರಕಾರ, ಜಾಗತೀಕರಣ, ಬಡತನದ ರೇಖೆಯ ಕೆಳಗಿರುವ ಜನರ ಸಂಖ್ಯೆಯನ್ನು ಹೆಚ್ಚು ಮಾಡಿದೆ''[೬]. ಹೀಗಾಗಿಯೇ ಹೆಚ್ಚು ಹೆಚ್ಚು ಜನರು ಜಾಗತೀಕರಣವನ್ನು ಬಹಿರಂಗವಾಗಿ ವಿರೋಧಿಸಿದ್ದಾರೆ.

ಮಾಹಿತಿ ತಂತ್ರಜ್ಞಾನ, ಪ್ರಸ್ತುತ ಜಾಗತೀಕರಣದ ಪರಿಸ್ಥಿತಿಯಲ್ಲಿ ಮುಕ್ತ ವ್ಯಾಪಾರವನ್ನು ಹೆಚ್ಚು ತೀವ್ರಗೊಳಿಸಲು ಸಹಾಯ ಮಾಡುತ್ತಿದೆ. ಕ್ಷಿಪ್ರ ಮಾಹಿತಿ ಲಭ್ಯತೆ, ವಾಣಿಜ್ಯದ ವೇಗವನ್ನು ವೃದ್ಧಿಸಿದೆ ಮತ್ತು ವ್ಯಾಪಾರದ ಸ್ವರೂಪವನ್ನೇ ಬದಲಿಸಿದೆ. ಮಾಹಿತಿ

ಲಭ್ಯತೆಯ ವೆಚ್ಚ ಬಹಳ ಕಡಿಮೆಯಾಗಿರುವುದರಿಂದ, ಭೌಗೋಳಿಕ ಪ್ರದೇಶಗಳ ನಡುವಣ ಅಂತರ ಬಹಳ ಕಡಿಮೆಯಾಗಿದೆ. ಜಾಗತೀಕರಣ, ಮಾಹಿತಿ ತಂತ್ರಜ್ಞಾನದ ಲಾಭವನ್ನು ಪಡೆದು, ಕಡಿಮೆ ಕೂಲಿಯಿರುವ, ಕಂಪ್ಯೂಟರ್ ಜ್ಞಾನವಿರುವ ಮತ್ತು ಇಂಗ್ಲಿಷ್ ಭಾಷೆ ಬಲ್ಲ ಜನರಿರುವ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ, ಕೆಲಸಗಳನ್ನು ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ವರ್ಗಾವಣೆ ಮಾಡುವುದು ಸಾಧ್ಯವಾಗಿದೆ.

ಮಹಿಳೆಯನ್ನೇ ತೆಗೆದುಕೊಳ್ಳುವುದಾದರೆ ಜಾಗತೀಕರಣದಿಂದಾಗಿರುವ ಆಧುನೀಕರಣದಲ್ಲಿ ಸಹ ಮಹಿಳೆಯ ಪಾತ್ರ ಅತ್ಯಂತ ಹಿರಿದಾಗಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಮಾಹಿತಿ ತಂತ್ರಜ್ಞಾನದಿಂದಾಗಿ, ಡಿಜಿಟಲ್ ವಿಭಜನೆ ನಡೆದಿದೆ. ವಿಶ್ವವ್ಯಾಪಾರವನ್ನೇ ನಾವು ತೆಗೆದುಕೊಂಡರೂ, ಇಂದಿಗೂ ಸಹ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಇದರ ಹೆಚ್ಚಿನ ಲಾಭವನ್ನು ಪಡೆಯುತ್ತಿವೆ. ಈ ರಾಷ್ಟ್ರಗಳನ್ನು ಬಿಟ್ಟು ಅಭಿವೃದ್ಧಿಶೀಲ ರಾಷ್ಟ್ರಗಳನ್ನೇ ತೆಗೆದುಕೊಂಡರೂ ಸಹ, ಏಷ್ಯದ ರಾಷ್ಟ್ರಗಳು ಇದರಲ್ಲಿ ಪ್ರಮುಖ ಸ್ಥಾನ ಪಡೆಯುತ್ತವೆ. ಇದರ ನಂತರದ ರಾಷ್ಟ್ರಗಳೆಂದರೆ ಲ್ಯಾಟಿನ್ ಅಮೆರಿಕಾ. ಇಂದಿಗೂ ಸಹ ಆಫ್ರಿಕಾ ಮತ್ತು ಇತರ ಅಭಿವೃದ್ಧಿಶೀಲ ರಾಷ್ಟ್ರಗಳು ವಿಶ್ವ ವ್ಯಾಪಾರದಲ್ಲಿ ಪಡೆದಿರುವ ಭಾಗ ಅತ್ಯಲ್ಪ. ಏಷ್ಯಾದಲ್ಲಿ ಸಹ ವ್ಯಾಪಾರದ ದೃಷ್ಟಿಯಿಂದ, ಮುಖ್ಯವಾಗಿ ಕೆಲವೇ ರಾಷ್ಟ್ರಗಳು ಗಣನೆಗೆ ಬರುತ್ತವೆ. ಅವುಗಳೆಂದರೆ ಭಾರತ, ಚೈನಾ ಮತ್ತು ಫಿಲಿಪೈನ್ಸ್. ಹೀಗಿರುವಾಗ ಈ ರಾಷ್ಟ್ರಗಳಲ್ಲಿರುವ ಸ್ತ್ರೀಯರಿಗೆ, ಮಾಹಿತಿ ತಂತ್ರಜ್ಞಾನದ ಪ್ರಗತಿಯಿಂದ ಆಗಿರುವ ಲಾಭ ಅತ್ಯಲ್ಪವೆಂದೇ ಹೇಳಬೇಕು.

ಮಾಹಿತಿ ತಂತ್ರಜ್ಞಾನದ ಕ್ರಾಂತಿಯ ಪೂರ್ವದಲ್ಲಿ, ಮಹಿಳೆಗೆ, ಸಮಾಜದಲ್ಲಿ ಸಮಾನತೆ ಇಲ್ಲದಿರುವುದಕ್ಕೆ ಕೊಡಲಾಗುತ್ತಿದ್ದ ಕಾರಣಗಳು ಹಲವು. ಆಕೆ ಅಬಲೆ ಮತ್ತು ಸಮಾಜದಲ್ಲಿ ಅನೇಕ ಕಾರ್ಯಗಳನ್ನು ಆಕೆ ಏಕಕಾಲದಲ್ಲಿ ನಿರ್ವಹಿಸಬೇಕು. ತಾಯಿಯಾಗಿ, ಪತ್ನಿಯಾಗಿ, ಉದ್ಯೋಗಿಯಾಗಿ ಆಕೆ ಅನೇಕ ಕಾರ್ಯಗಳನ್ನು ನಿರ್ವಹಿಸಬೇಕಾಗಿರುವುದರಿಂದ, ಸಹಜವಾಗಿಯೇ ಪುರುಷನಿಗೆ ಸಮನಾಗಿ ಆಕೆ ಕೆಲಸ ಮಾಡುವುದು ಸಾಧ್ಯವಿಲ್ಲವೆಂದು ವಾದಿಸಲಾಗುತ್ತಿತ್ತು ಮತ್ತು ನಂಬಲಾಗುತ್ತಿತ್ತು. ವಾಸ್ತವವಾಗಿ ಸಾಫ್ಟ್‌ವೇರ್ ಉದ್ಯಮಗಳಲ್ಲಿ ಕಾಲ್‌ಸೆಂಟರ್‌ಗಳಲ್ಲಿ, ಬಿ.ಪಿ.ಒ.ಗಳಲ್ಲಿ ಹೆಚ್ಚು ಹೆಚ್ಚು ಪ್ರಮಾಣದ ಸ್ತ್ರೀಯರು ನೇಮಕಗೊಳ್ಳುತ್ತಿರುವುದು ನಿಜ. ಆದರೆ, ಪುರುಷರಂತೆ ಇವರಿಗೆ

ಸಮಾನ ಅವಕಾಶಗಳನ್ನು ದೊರಕಿಸಿ ಕೊಡಲಾಗುತ್ತಿದೆ ಎಂದು ಹೇಳುವುದು ಸಾಧ್ಯವಿಲ್ಲ.

ಮಹಿಳೆಯರು ಹೆಚ್ಚಾಗಿ, ಕಂಪ್ಯೂಟರ್, ಇಂಗ್ಲೀಷ್ ಮತ್ತು ವಾಣಿಜ್ಯ ಕುಶಲತೆ ವಿದ್ಯಾಭ್ಯಾಸಗಳಿಂದ ವಂಚಿತರಾಗಿದ್ದಾರೆ. ಗಂಡು ಮಕ್ಕಳಿಗೆ ಈ ವಿಷಯಗಳಲ್ಲಿ ಸಿಗುತ್ತಿರುವ ಅವಕಾಶಗಳು ಹೆಣ್ಣು ಮಕ್ಕಳಿಗೆ ಸಿಗುತ್ತಿಲ್ಲ. ಕಂಪ್ಯೂಟರ್ ಜ್ಞಾನ, ಆಧುನಿಕ ವಾಣಿಜ್ಯ ವ್ಯವಹಾರಗಳ ಅವಿಭಾಜ್ಯ ಲಿಂಗವಾಗಿದೆ ಎನ್ನುವುದು ಎಲ್ಲರಿಗೂ ತಿಳಿದಿರುವ ವಿಷಯ. ಇದರ ಜ್ಞಾನವಿಲ್ಲದೆ, ಇಂದು ಅಗಾಧ ಪ್ರಮಾಣದಲ್ಲಿ ನಡೆಯುತ್ತಿರುವ ಅಂತರ್‌ಜಾಲ ವ್ಯಾಪಾರದಲ್ಲಿ ಭಾಗವಹಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಮಹಿಳೆಯರಿಗೆ ಮುಖ್ಯವಾಗಿ, ಸ್ವಯಂ ಉದ್ಯೋಗಗಳನ್ನು ಸ್ಥಾಪಿಸುವ ಅವಕಾಶಗಳು ಮತ್ತು ಜಾಗತೀಕರಣ ವ್ಯಾಪಾರ ವ್ಯವಸ್ಥೆಯಲ್ಲಿ ಭಾಗವಹಿಸುವ ಅವಕಾಶಗಳು ಬಹಳ ಕಡಿಮೆ.

ಇಂಟರ್‌ನೆಟ್ ವ್ಯವಹಾರ ಮುಖ್ಯವಾಗಿ ಇಂಗ್ಲಿಷ್ ಭಾಷೆಯ ಮುಖಾಂತರ ನಡೆಯುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಹೆಚ್ಚಿನ ಮಹಿಳೆಯರಿಗೆ ವಿದ್ಯಾಭ್ಯಾಸವೂ ಇಲ್ಲ. ಆಂಗ್ಲಭಾಷಾ ಜ್ಞಾನವೂ ಇಲ್ಲ. ಬಹುಭಾಷಾ ಇಂಟರ್‌ನೆಟ್ ಚಾಲ್ತಿಗೆ ಬಂದಿದ್ದರೂ, ಇನ್ನೂ ಇಂಗ್ಲಿಷ್ ಭಾಷೆಯೇ ಇಂಟರ್‌ನೆಟ್‌ನ ಪ್ರಧಾನ ಭಾಷೆಯಾಗಿದೆ. ಈ ಭಾಷೆಯ ಜ್ಞಾನವಿಲ್ಲದೆ ಮಹಿಳೆಯರು ನೆಟ್ ಮೂಲಕ ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ತೊಡುಗುವುದು ಸಾಧ್ಯವಿಲ್ಲ. ಆದ್ದರಿಂದ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಮಹಿಳೆಯರು ಇಂಗ್ಲಿಷ್ ಜ್ಞಾನವನ್ನು ಪಡೆಯಬೇಕಾದುದು ಅನಿವಾರ್ಯವಾಗಿದೆ.

ಇಂಗ್ಲಿಷ್ ಜ್ಞಾನವಿರುವ, ಹೆಚ್ಚಾಗಿ ಪಟ್ಟಣದಲ್ಲಿ ಕೇಂದ್ರೀಕೃತವಾಗಿರುವ ಮಹಿಳೆಯರು, ಡಿಜಿಟಲ್ ವ್ಯವಸ್ಥೆಯಲ್ಲಿ ಉದ್ಯೋಗ ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಮುಖ್ಯವಾಗಿ ಇದು ಸಾಫ್ಟ್‌ವೇರ್ ಕ್ಷೇತ್ರದಲ್ಲಿ ನಡೆದಿದೆ. ಈ ಕ್ಷೇತ್ರದಲ್ಲಿ ಒಟ್ಟು ಉದ್ಯೋಗದಲ್ಲಿ ಶೇ.೨೦ ರಷ್ಟು ಮಾತ್ರ ಮಹಿಳೆಯರಾಗಿದ್ದಾರೆ ಎನ್ನುವುದು ಸಹ ಗಮನಾರ್ಹ ಅಂಶ. ಇಲ್ಲಿಯೂ ಸಹ ಉನ್ನತ ಹುದ್ದೆಗಳು ಪುರುಷರಿಗೇ ಮೀಸಲು. ಇದಲ್ಲದೆ, ಸಾಫ್ಟ್‌ವೇರ್ ಕ್ಷೇತ್ರದ ಹುದ್ದೆಗಳಲ್ಲಿ ಸಹ ಕೆಳಗಿನ ಹುದ್ದೆಗಳಲ್ಲಿ ಮಹಿಳೆಯರು ಹೆಚ್ಚಾಗಿದ್ದಾರೆ. ಇಲ್ಲಿ ಅವರು ಮೇಲು ಸ್ಥಾನಕ್ಕೇರುವುದು ಕಷ್ಟ. ಒಂದು ಕಡೆ ಸಂಸಾರದ ಜವಾಬ್ದಾರಿ, ಮತ್ತೊಂದು ಕಡೆ ಕೆಲಸದ ಒತ್ತಡ ಇವು ಮಹಿಳಾ ಉದ್ಯೋಗಿಗಳನ್ನು ಸತತವಾಗಿ ಕಾಡುತ್ತವೆ. ಅನೇಕ ಸಂದರ್ಭಗಳಲ್ಲಿ ಅವರು ತಮ್ಮ ಹುದ್ದೆಗೆ ರಾಜೀನಾಮೆ ಕೊಟ್ಟಿರುವ

ನಿದರ್ಶನಗಳೂ ಇವೆ.

ಮಾಹಿತಿ ತಂತ್ರಜ್ಞಾನಕ್ಕೆ ಸಂಬಂಧಿಸಿದ ಸೇವಾಕ್ಷೇತ್ರದಲ್ಲಿ ಮಹಿಳೆಯರಿಗೆ ಉದ್ಯೋಗಾವಕಾಶಗಳು ವಿಪುಲವಾಗಿ ತೆರೆದುಕೊಳ್ಳುತ್ತಿವೆ. ಭಾರತದಲ್ಲಿ ಸುಮಾರು ೧.೧ ದಶಲಕ್ಷ ಮಹಿಳೆಯರು ಈ ಉದ್ಯಮದಲ್ಲಿ ಉದ್ಯೋಗಸ್ಥರಾಗಿದ್ದಾರೆ. ಬರುವ ವರ್ಷಗಳಲ್ಲಿ ಇದು ಇನ್ನೂ ಹೆಚ್ಚಾಗುವ ಸಾಧ್ಯತೆಗಳಿವೆ. ಕಂಪ್ಯೂಟರ್‌ನಲ್ಲಿ ಮಾಹಿತಿ ಸಂಗ್ರಹಣೆ ಮತ್ತು ಅದರ ವಿಶ್ಲೇಷಣೆ, ಗ್ರಾಹಕರ ಕಾಲ್‌ಸೆಂಟರ್‌ಗಳು, ಹೋಟೆಲ್ ಮತ್ತು ಕಾಲ್ ರಿಸರ್ವೇಷನ್‌ಗಳು ಇತ್ಯಾದಿ. ಈ ಕೆಲಸಗಳಿಗೆ ಹೆಚ್ಚಿನ ಕುಶಲತೆ ಅಗತ್ಯವಿರುವುದಿಲ್ಲ. ಹೀಗಾಗಿ ಇಲ್ಲಿ ಮಹಿಳೆಯರೇ ಪ್ರಮುಖವಾಗಿ ಉದ್ಯೋಗದಲ್ಲಿದ್ದಾರೆ. ಇದಲ್ಲದೆ ಮಾಹಿತಿ ಸರಿಯಿದೆಯೇ ಇಲ್ಲವೇ ಎಂಬುದರ ಪರೀಕ್ಷೆ, ವಿಮಾ ಬೇಡಿಕೆ ಮುಂತಾದವುಗಳ ಪರಿಶೀಲನೆ, ಸೆಕ್ರೆಟರಿ ಕೆಲಸಗಳು, ಕಾಲ್ ಸೆಂಟರ್‌ಗಳಲ್ಲಿ ಲೆಕ್ಕಗಳ ವಿವರ ನೀಡಿಕೆ, ಸರಕು ಸೇವೆಗಳ ಮಾರಾಟದ ನಂತರದ ವಿವರಣೆ ನೀಡಿಕೆ ಇತ್ಯಾದಿ. ಈ ಕೆಲಸಗಳಿಗೆ ತಾಂತ್ರಿಕ ತರಬೇತಿ ಅಗತ್ಯ. ಇಲ್ಲಿಯೂ ಸಹ ಮಹಿಳೆಯರೇ ಪ್ರಧಾನವಾಗಿ ಕೆಲಸ ಮಾಡುತ್ತಿದ್ದಾರೆ. ಅಕೌಂಟಿಂಗ್, ಬುಕ್‌ಕೀಪಿಂಗ್, ಎಲೆಕ್ಟ್ರಾನಿಕ್, ವೆಬ್‌ಸೈಟ್ ಡಿಸೈನಿಂಗ್, ಮೆಡಿಕಲ್ ಟ್ರಾನ್ಸ್‌ಕಿಪ್ಷನ್, ಲೀಗಲ್ ಟ್ರಾನ್ಸ್‌ಕ್ರಿಪ್ಷನ್, ಮೆಡಿಕಲ್ ರಿಕಾರ್ಡ್‌ಗಳ ನಿರ್ವಹಣೆ, ಸಂಶೋಧನೆ ಮತ್ತು ತಾಂತ್ರಿಕ ಬರವಣಿಗೆಗಳು ಇತ್ಯಾದಿ ಕೆಲಸಗಳಲ್ಲಿ ಮಹಿಳಾ ಉದ್ಯೋಗಸ್ಥರು ಅತ್ಯಲ್ಪ.

ಹೆಚ್ಚಿನ ಶ್ರಮವನ್ನು ಬೇಡುವ ಕಾಲ್ ಸೆಂಟರ್‌ನಲ್ಲಿ ಮಹಿಳೆ ಹೇಗೆ ಕೆಲಸಮಾಡುತ್ತಾಳೆ ಎನ್ನುವುದು ಸ್ವಾರಸ್ಯಕರ. ನ್ಯೂಯಾರ್ಕ್‌ನಲ್ಲಿ ಕಾನೂನು ಮೀರಿರುವುದಕ್ಕಾಗಿ ಜುಲ್ಮಾನೆ ಹಾಕಲಾಗಿದೆ ಎಂದಿಟ್ಟುಕೊಳ್ಳಿ. ಉದಾಹರಣೆಗೆ, ನಿಗದಿಯಾದ ವೇಗಕ್ಕಿಂತ ಹೆಚ್ಚು ವೇಗದಲ್ಲಿ, ಕಾರು ಓಡಿಸಿದ್ದಕ್ಕಾಗಿ, ಪಾರ್ಕ್‌ನಲ್ಲಿ ಕಸದ ರಾಶಿ ಹಾಕಿದ್ದಕ್ಕಾಗಿ ಇತ್ಯಾದಿ. ಈ ಜುಲ್ಮಾನೆಯ ಟಿಕೆಟ್, ನ್ಯೂಯಾರ್ಕ್‌ನಲ್ಲೇ ಪರಿಷ್ಕೃತವಾಗುವುದಿಲ್ಲ. ಈ ಜುಲ್ಮಾನೆ ಚೀಟಿ ಬರೆದ ಒಂದೆರಡು ದಿನಗಳಲ್ಲಿ, ನ್ಯೂಯಾರ್ಕ್‌ನಲ್ಲಿ ಸ್ಕ್ಯಾನ್ ಆಗಿ, ಡಿಜಿಟಲ್ ಫೋಟೋ ಗ್ರಾಫ್ ಮೂಲಕ ಬೆಂಗಳೂರು ಕಾಲ್‌ಸೆಂಟರ್‌ನ ಕಂಪ್ಯೂಟರ್ ತಲುಪುತ್ತದೆ. ಬೆಂಗಳೂರಿನಲ್ಲಿನ ಕಾಲ್ ಸೆಂಟರ್‌ನ ಮಹಿಳೆ ಜುಲ್ಮಾನೆದಾರನ ವಿವರಗಳೆಲ್ಲವನ್ನೂ ಕಂಪ್ಯೂಟರ್‌ನಲ್ಲಿ ಟೈಪ್ ಮಾಡಿ ಮತ್ತೆ ನ್ಯೂಯಾರ್ಕ್‌ಗೆ ಇಂಟರ್‌ನೆಟ್ ಮೂಲಕ ಕಳುಹಿಸುತ್ತಾಳೆ. ಇದು ಅಲ್ಲಿ ಎಲೆಕ್ಟ್ರಾನಿಕ್ ಮಾಧ್ಯಮದಲ್ಲಿ ಸಂಗ್ರಹಣೆಯಾಗುತ್ತಾ

ಹೋಗುತ್ತದೆ. ವರ್ಷಕ್ಕೆ ನ್ಯೂಯಾರ್ಕ್‌ನ ಸರಾಸರಿ ೫,೦೦,೦೦೦ಕ್ಕೂ ಮಿಕ್ಕ ಜುಲ್ಮಾನೆ ಚೀಟಿಗಳು ಭಾರತದಲ್ಲಿ ಪರಿಷ್ಕೃತವಾಗುತ್ತವೆ. ಇಂತಹ ಕಾಂಟ್ರಾಕ್ಟ್‌ಗಳನ್ನು ಪಡೆಯುವ ಭಾರತದ ಕಾಲ್‌ಸೆಂಟರ್‌ನವರು ಮಹಿಳೆಯರಿಗೆ, ಭಾರತದ ಸರಾಸರಿ ಕೂಲಿಗಿಂತ ನಾಲ್ಕುಪಟ್ಟು ಹೆಚ್ಚು ಕೂಲಿಯನ್ನು ಕೊಡುತ್ತಾರೆ. ಆದರೆ ಇದು ಅತ್ಯಧಿಕ ಶ್ರಮವನ್ನು ಬೇಡುವ ಕೆಲಸ ಎನ್ನುವುದು ಸ್ಪಷ್ಟ.

ಕಾಲ್‌ಸೆಂಟರ್‌ಗಳಲ್ಲಿ ಶೇಕಡ ೪೦-೭೦ರಷ್ಟು ಮಹಿಳಾ ಉದ್ಯೋಗಿಗಳಿದ್ದು ಅವರು ಕಷ್ಟಪಟ್ಟು ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಮಹಿಳೆಯರು ೨೦-೨೫ ವರ್ಷಗಳ ವಯಸ್ಸಿನವರಾಗಿರುವುದು ಸಹ ವಿಶೇಷ. ಬರುವ ವರ್ಷಗಳಲ್ಲಿ ಕಾಲ್‌ಸೆಂಟರ್‌ಗಳ ಸಂಖ್ಯೆ ಬಹಳ ಹೆಚ್ಚಾಗುವ ಸಾಧ್ಯತೆಗಳಿವೆ. ಇದರಿಂದ ಮಹಿಳೆಯರಿಗೆ ಉದ್ಯೋಗಾವಕಾಶಗಳು ಹೆಚ್ಚುವ ಸಾಧ್ಯತೆಗಳು ಇವೆ.

ಇಲ್ಲಿಯೂ ಸಹ ಮಹಿಳೆಯರಿಗೆ ಶೋಷಣೆ ತಪ್ಪಿದ್ದಲ್ಲ. ಅವಾಚ್ಯ ಶಬ್ದಗಳಿಂದ ಬಯ್ಯುತ್ತಾರೆ. ಇದು ಅಸಹನೀಯವಾಗುವ ಉದಾಹರಣೆಗಳೂ ಇವೆ. ಇದಲ್ಲದೆ ಕಾಲ್‌ಸೆಂಟರ್‌ನಲ್ಲಿ ರಾತ್ರಿ ವೇಳೆ ಸಹ ಮಹಿಳೆಯರು ಕೆಲಸಮಾಡಬೇಕು. ಇಲ್ಲಿ ಅಭದ್ರತೆ ಅವರನ್ನು ಕಾಡುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಅತ್ಯಾಚಾರ ಮತ್ತು ಕೊಲೆಗಳು ಕೂಡ ಆಗಿವೆ. ಉದಾ: ಇತ್ತೀಚೆಗೆ ನಡೆದ ಪ್ರತಿಭಾಳ ಸಾವು.

ಜಾಗತೀಕರಣ, ಮಾಹಿತಿ ತಂತ್ರಜ್ಞಾನ ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ, ಅತ್ಯಂತ ಮುಖ್ಯ ವಿಷಯವೆಂದರೆ ಇದು ಭಾರತದಂತಹ ಅಭಿವೃದ್ಧಿಶೀಲ ದೇಶದ, ಗ್ರಾಮೀಣ ಮಹಿಳೆಯರನ್ನು ಇನ್ನೂ ಮುಟ್ಟಿಯೇ ಇಲ್ಲ. ಹೀಗಾಗಿ ಈ ಕ್ಷೇತ್ರದ ಎಲ್ಲ ವಿಷಯಗಳೂ ಪಟ್ಟಣ ಪ್ರದೇಶದ ವಿದ್ಯಾವಂತ ಮಹಿಳೆಯರಿಗೆ ಸೀಮಿತವಾಗುತ್ತದೆ. ಆದ್ದರಿಂದ ತಮ್ಮ ಬಡಕುಟುಂಬಗಳನ್ನು ನಿರ್ವಹಿಸುವ, ಕೃಷಿ ಕಾರ್ಮಿಕರಾಗಿ ಕೆಲಸ ಮಾಡುವ, ಕೈ ಕಸಬು ಮಾಡುವ, ಇತರ ಕೂಲಿ ಕೆಲಸಗಳನ್ನು ಮಾಡುವ ಮಹಿಳೆಯರ ಪಾಲಿಗೆ, ಮಾಹಿತಿ ತಂತ್ರಜ್ಞಾನ ಪ್ರಪಂಚ ತೀರ ಅಪರಿಚಿತ ಆದ್ದರಿಂದ ನಮ್ಮ ಮುಂದೆ ಉಳಿಯುವ ಪ್ರಶ್ನೆ ಜಾಗತೀಕರಣದ ಪರಿಣಾಮ ಯಾವ ಮಹಿಳೆಯರ ಮೇಲೆ ಉಂಟಾಗಿದೆ ಎನ್ನುವುದು. ಹೀಗಾಗಿ ಮಾಹಿತಿ ತಂತ್ರಜ್ಞಾನದ ಪ್ರಗತಿ ಮಹಿಳೆಯರನ್ನು ಸಬಲೀಕರಣಗೊಳಿಸಿದೆ ಎಂದು ಹೇಳುವುದಕ್ಕಾಗುವುದಿಲ್ಲ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿರುವ ಅಸಂಖ್ಯಾತ ಅನಕ್ಷರಸ್ಥ ಗ್ರಾಮೀಣ ಮಹಿಳೆಯರು, ಜಾಗತೀಕರಣಕ್ಕೆ ನೇರವಾಗಿ ಪ್ರವೇಶಿಸುವುದಾಗಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉದ್ಯೋಗ ಪಡೆಯುವುದಾಗಲಿ ಇನ್ನೂ ಅನೇಕ ವರ್ಷಗಳವರೆಗೆ ಸಾಧ್ಯವಿಲ್ಲ.

### ಊ) ಮಹಿಳೆ ಮತ್ತು ಸಮೂಹ ಮಾಧ್ಯಮ:

ಮಹಿಳೆ ಇರದ ಕ್ಷೇತ್ರವೇ ವಿರಳವಾಗಿರುವ ಈ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನ ಯುಗದಲ್ಲಿ ಪತ್ರಿಕೋದ್ಯಮ ವೃತ್ತಿಗೆ ಮಹಿಳೆಯರ ಪ್ರವೇಶ ಹೊಸದೇನಲ್ಲ. ಕಳೆದ ಒಂದು ಶತಮಾನದಿಂದಲೂ ಮಹಿಳೆಯರು ಪತ್ರಿಕಾರಂಗದಲ್ಲಿ ದುಡಿಯುತ್ತಿದ್ದಾರೆ ಎಂದರೆ ಆಶ್ಚರ್ಯವಾಗಬಹುದು. ಅದೂ ಭಾರತದಲ್ಲಿ ಈ ಚರಿತ್ರಾರ್ಹ ಘಟನೆ ನಡೆದಿದೆ ಎಂದರೆ ಅದರ ಬಗ್ಗೆ ಕುತೂಹಲ ಹೆಚ್ಚಾಗುವುದರಲ್ಲಿ ಸಂಶಯವೇ ಇಲ್ಲ. ಮಹಿಳೆಯರ ಒಡನಾಟ ಕೇವಲ ಅಡಿಗೆಮನೆಗೆ ಮಾತ್ರ ಸೀಮಿತವಾಗಿದ್ದ ಕಾಲದಲ್ಲೇ ಅಂದರೆ ಹತ್ತೊಂಬತ್ತನೇ ಶತಮಾನದ ಆದಿಯಲ್ಲೇ ಭಾರತದಲ್ಲಿ ಪತ್ರಿಕಾರಂಗಕ್ಕೆ ಮಹಿಳೆಯರು ಕಾಲಿಟ್ಟಿದ್ದು ಮಹಿಳಾ ಸಬಲೀಕರಣದ ಮೊದಲ ಹೆಜ್ಜೆ ಎಂದು ಹೇಳಿದರೂ ಉತ್ಪ್ರೇಕ್ಷೆಯಲ್ಲ. ಅಂದಿನಿಂದ ಇಂದಿನವರೆಗೂ ಮಹಿಳೆಯರು ಅನೇಕ ಏರುಪೇರುಗಳ ನಡುವೆಯೂ ಪತ್ರಿಕಾವೃತ್ತಿಗೆ ತಮ್ಮದೇ ಆದ ಅಮೂಲ್ಯ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

### ಮಹಿಳೆ ಮತ್ತು ಪತ್ರಿಕೆ:

ಸುಶಿಕ್ಷಿತ ಮಹಿಳೆಯರು ಕಡಿಮೆಯಿದ್ದು ೧೯ನೇ ಶತಮಾನದಲ್ಲೇ ಕವಿ ರವೀಂದ್ರನಾಥ ಠಾಕೂರ್‌ರ ಸಹೋದರಿ ಸ್ವರ್ಣದೇವಿ ಕುಮಾರಿ ಎನ್ನುವವರು 'ಭಾಮಾ ಬಾದಿನಿ ಪತ್ರಿಕೆ' ನಡೆಸಿ ಭಾರತದಲ್ಲೇ ಪ್ರಥಮ ಮಹಿಳಾ ಸಂಪಾದಕಿ ಎನ್ನುವ ಕೀರ್ತಿಗೆ ಪಾತ್ರರಾದರು. ಸ್ವಾತಂತ್ರ್ಯಪೂರ್ವದಲ್ಲಿ ಒಟ್ಟಾರೆ ಪತ್ರಿಕೋದ್ಯಮದ ಕ್ಷೇತ್ರವನ್ನು ಅವಲೋಕಿಸಿದಾಗ ಅಲ್ಲಿ ನಾವು ಕಾಣುವುದು ದೇಶಸೇವೆಗಾಗಿ ಮೀಸಲಿಟ್ಟ ಪತ್ರಿಕಾಧರ್ಮ. ರಾಜಾರಾಮ್ ಮೋಹನ್‌ರಾಯ್‌ರಿಂದ ಗಾಂಧೀಜಿಯವರೆಗೂ ಪತ್ರಿಕೆಯನ್ನು ಸಮಾಜ ಸುಧಾರಣೆ ಹಾಗೂ ದೇಶದ ಸ್ವಾತಂತ್ರ್ಯ ಹೋರಾಟದ ಸಾಧನವಾಗಿ ಬಳಸಿಕೊಂಡಿದ್ದನ್ನು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ. ಪತ್ರಿಕೆಯ ಸಂಪರ್ಕವನ್ನಿರಿಸಿಕೊಂಡಿದ್ದ ಮಹಿಳಾ ಬರಹಗಾರ್ತಿಯರ ಉದ್ದೇಶ ಇದಕ್ಕಿಂತ ಭಿನ್ನವಾಗಿರಲಿಲ್ಲ. ಸ್ವಾತಂತ್ರ್ಯ ಚಳುವಳಿ, ಸಮಾಜ

ಸುಧಾರಣೆ, ಮಹಿಳೆಯರ ಉನ್ನತಿ, ವಿಧವಾ ವಿವಾಹ, ಸತಿ ಪದ್ಧತಿಯ ವಿರುದ್ಧ ಹಾಗೂ ಮಹಿಳೆಯರ ಆರೋಗ್ಯ ಮತ್ತು ಶಿಕ್ಷಣದಂತಹ ಸಮಾಜೋದ್ಧಾರಕ ಕಾರ್ಯಗಳಿಗಾಗಿ ಮಹಿಳೆಯರು ಪತ್ರಿಕೆಯನ್ನು ಪ್ರಬಲ ಅಸ್ತ್ರವಾಗಿ ಬಳಸಿಕೊಂಡದ್ದನ್ನು ಕಾಣುತ್ತೇವೆ. ಅವರ ಮುಖ್ಯಗುರಿ ಕೂಡ ದೇಶಸೇವೆಯಾಗಿತ್ತು. ಪತ್ರಿಕೆಯನ್ನು ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗಳಿಗಾಗಿ ಸಮರ್ಥವಾಗಿ ಬಳಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಹಿಳೆಯರಿಂದ ನಡೆಯಿತು ಮೂಢನಂಬಿಕೆಯಿಂದ ಆವೃತ್ತವಾಗಿದ್ದ ಅಂದಿನ ಸಮಾಜದ ಕಟ್ಟುಪಾಡುಗಳನ್ನು ಮುರಿದು ಹೋರಾಡಿದ ಮಹಿಳೆಯರು ಇವರು.

ಪತ್ರಿಕೋದ್ಯಮದ ಮುಂಚೂಣಿಯಲ್ಲಿದ್ದು ಈ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಮಹಿಳೆಯರಲ್ಲಿ ಸರಳಾದೇವಿ, ಕುಮುದಿನಿ ಮಿತ್ತಲ್, ಹರದೇವಿ, ಮದಾಂ ಕೆ.ಆರ್, ಕಾಮಾಶಾರದಾ ಮೆಥಾ, ಕಮಲಾದಾಸ್ ಗುಪ್ತಾ, ರಾಮೇಶ್ವರಿ ನೆಹರೂ, ಲೀಲಾ ರಾಯ್, ಆ್ಯನಿಬೆಸೆಂಟ್, ಕಮಲಾದೇವಿ ಚಟ್ಟೋಪಾಧ್ಯಾಯ, ಅರುಣಾ ಅಸಫ್ ಆಲಿ ಮತ್ತು ಮ್ಯಾಡಂ ಸೋಫಿಯಾ ವಾಡಿಯಾ ಪ್ರಮುಖರು. ತಮ್ಮ ವೈಯುಕ್ತಿಕ ಜೀವನವನ್ನು ಕಡೆಗಣಿಸಿ ದೇಶಸೇವೆಯನ್ನು ಗುರಿಯನ್ನಾಗಿಟ್ಟುಕೊಂಡ ಈ ಮಹಿಳೆಯರಿಗೆ ಪತ್ರಿಕೆ ಒಂದು ವರಪ್ರಧಾನವಾಯಿತು. ಲೇಖನಿ ಇವರ ಸಮಾಜ ಸುಧಾರಕ ಕಾರ್ಯಗಳಿಗೆ ಅಸ್ತ್ರವಾಯಿತು.

ಸ್ವಾತಂತ್ರ್ಯ ಪೂರ್ವದಲ್ಲೇ ಈ ದಿಟ್ಟ ಪತ್ರಕರ್ತೆಯರು ಮಹಿಳೆಯರ ಪ್ರವೇಶಕ್ಕೆ ಭದ್ರಬುನಾದಿ ಹಾಕಿದರು. ಅಲ್ಲದೇ ಸಾಹಿತ್ಯಕ್ಷೇತ್ರದಲ್ಲೂ ಈ ಪತ್ರಕರ್ತೆಯರು ಕೃಷಿ ಮಾಡಿದ್ದರಿಂದ ಸೃಜನಶೀಲತೆ, ಉತ್ತಮ ಭಾಷಾಶೈಲಿ ಮತ್ತು ಅಭಿರುಚಿ ಪತ್ರಿಕೋದ್ಯಮದಲ್ಲೂ ಬೆಳೆಯಲು ಅವಕಾಶವಾಯಿತು. ಆದರೆ ವಿಪರ್ಯಾಸವೆಂದರೆ ಇಡೀ ಪತ್ರಿಕೆಯ ಸಂಪಾದಕತ್ವದಲ್ಲಿ ಒಂಟಿಯಾಗಿ ಸ್ವಪ್ರಯತ್ನದಿಂದಲೇ ನಿರ್ವಹಿಸಿದ್ದ ನಿದರ್ಶನಗಳಿದ್ದರೂ ಅವರನ್ನು ಮೂಲತಃ ಲೇಖಕಿಯರೆಂದೇ ಪರಿಗಣಿಸಲಾಗಿದ್ದಿತು. ಪತ್ರಕರ್ತರೆಂಬ ಅಂಕಿತ ಅವರಿಗೆ ದಕ್ಕಲು ಬಹಳಷ್ಟು ವರ್ಷಗಳೇ ಬೇಕಾಯಿತೆಂಬ ಸತ್ಯ ಈ ಕ್ಷೇತ್ರ ಪುರುಷ ಪ್ರಧಾನ ವೃತ್ತಿ ಎಂಬ ಭಾವನೆ ಆಳವಾಗಿ ಬೇರೂರಿದ್ದುದಕ್ಕೆ ಸಾಕ್ಷಿ.

ಹತ್ತೊಂಬತ್ತನೇ ಶತಮಾನದಲ್ಲಿ ಅಂದರೆ ೧೮೮೮ರಲ್ಲಿ ಕರ್ನಾಟಕ ವಾಣೀ ವಿಲಾಸ ಪತ್ರಿಕೆ ಎಂಬ ಮಹಿಳಾ ಪತ್ರಿಕೆಯನ್ನು ವಿದ್ಯಾರ್ಥಿನಿಯರಿಗಾಗಿ ಮತ್ತು ಮಹಿಳೆಯರ ವಾಚನಕ್ಕಾಗಿ ಎಂಬ ಉದ್ದೇಶವನ್ನು ಹೊತ್ತ ಪತ್ರಿಕೆ ಪ್ರಾರಂಭವಾಯಿತು. ಮೈಸೂರಿನಲ್ಲಿ

ಪ್ರಾರಂಭವಾದ ಈ ದ್ವೈಮಾಸಿಕ ಪತ್ರಿಕೆಯ ಸಂಪಾದಕರು ಎಲ್.ಎಸ್.ಸುಬ್ಬರಾವ್.

ಕನ್ನಡದಲ್ಲಿ ನಂಜನಗೂಡಿನ ತಿರುಮಲಾಂಬಾರವರು ೧೯೧೩ರಲ್ಲಿ 'ಸತಿ ಹಿತೈಷಿಣಿ' ಎಂಬ ಗ್ರಂಥ ಮಾಲೆಯನ್ನು ಪ್ರಾರಂಭಿಸಿದ ಕನ್ನಡದ ಪ್ರಥಮ ಮಹಿಳಾ ಪತ್ರಕರ್ತೆಯಾದರು. ೧೯೧೬ರಲ್ಲಿ 'ಕರ್ನಾಟಕ ನಂದಿನಿ' ಎಂಬ ಮಹಿಳಾ ಮಾಸಪತ್ರಿಕೆಯನ್ನು ಕೂಡ ಇವರು ಪ್ರಾರಂಭಿಸಿದರು.

೧೯೧೩ರಲ್ಲಿ ಅಂದರೆ ೨೦ನೇ ಶತಮಾನದ ಆದಿಯಲ್ಲಿ ಪ್ರಾರಂಭವಾದ ಧರ್ಮವಿಚಾರ ಎಂಬ ಮಾಸಿಕ ಪತ್ರಿಕೆಗೆ ಎಂ. ಮಹದೇವ ಶಾಸ್ತ್ರಿ ಮತ್ತು ಎಂ.ಶ್ರೀನಿವಾಸಾಚಾರ್ಯರು ಸಂಪಾದಕರಾಗಿದ್ದರು.

೧೯೧೪ರಲ್ಲಿ ಮತ್ತೊಬ್ಬ ಮಹಿಳೆ ಟಿ.ಸಂಜೀವಮ್ಮ ಶಿವಮೊಗ್ಗಲ್ಲಿ 'ಭಾಗ್ಯೋದಯ' ಎನ್ನುವ ಪತ್ರಿಕೆಯನ್ನು ಹುಟ್ಟು ಹಾಕಿದರು. ಇವರನ್ನು ಕನ್ನಡ ಪತ್ರಿಕೋದ್ಯಮದಲ್ಲಿ ಸಂಪಾದಕಿಯಾಗಿ ದುಡಿದ ಪ್ರಥಮ ಮಹಿಳೆ ಎಂದು ಗುರುತಿಸಲಾಗಿದೆ.

ಆರ್.ಕಲ್ಯಾಣಮ್ಮರವರನ್ನು ಕನ್ನಡದ ಮೊದಲ ಮಹಿಳಾ ಫ್ರೀಲಾನ್ಸ್ ಪತ್ರಕರ್ತೆ ಎಂದು ಗುರುತಿಸಿದ್ದಾರೆ. ೨೦ನೇ ಶತಮಾನದ ಆದಿಯಲ್ಲಿ ಪ್ರಕಟವಾಗುತ್ತಿರುವ ಬಹಳಷ್ಟು ಪತ್ರಿಕೆಗಳಿಗೆ ಕಲ್ಯಾಣಮ್ಮ ಲೇಖನಗಳನ್ನು ಬರೆಯುತ್ತಿದ್ದರು. 'ಮಹಿಳೆಯರಿಂದ ಮಹಿಳೆಯರಿಗಾಗಿ' ಎಂಬ ಘೋಷಣೆಯೊಂದಿಗೆ 'ಸರಸ್ವತಿ' ಪತ್ರಿಕೆಯನ್ನು ಹೊರತರುತ್ತಿದ್ದರು. ನಾಲ್ಕು ದಶಕಗಳ ಕಾಲ ಈ ಪತ್ರಿಕೆ ಜೀವಂತವಾಗಿತ್ತು. ಕನ್ನಡ ಪತ್ರಿಕೋದ್ಯಮಕ್ಕೆ ನವಚೇತನ ಮೂಡಿಸಿದ ವ್ಯಕ್ತಿ ಕಲ್ಯಾಣಮ್ಮ. ಮೂವತ್ತರ ದಶಕದಲ್ಲೇ ಗೌರವ ನ್ಯಾಯಾಧೀಶರಾಗಿ ದುಡಿದ ಪ್ರಥಮ ಮಹಿಳೆ ಕಲ್ಯಾಣಮ್ಮ ನವರು. ೧೯೨೧ರಲ್ಲಿ 'ಸರಸ್ವತಿ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಪತ್ರಿಕಾರಂಗವನ್ನು ಸ್ವಾತಂತ್ರ್ಯಪೂರ್ವದಲ್ಲಿ ಶ್ರೀಮಂತಗೊಳಿಸಿದವರಲ್ಲಿ ದ್ವಾರಕಾಬಾಯಿಯವರೂ ಒಬ್ಬರು. ಇವರು ೧೯೩೦ರ ದಶಕದಲ್ಲಿ 'ಚಿತ್ರಾ' ಎಂಬ ಮಾಸಪತ್ರಿಕೆಯ ಸಂಪಾದಕಿಯಾಗಿದ್ದರು.

೧೯೧೭ರಲ್ಲಿಯೇ 'ಮಹಿಳಾ ಜ್ಞಾನೋತ್ಕರ್ಷಮಾಲೆ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಗದಗನಲ್ಲಿ ಸಿ.ಆರ್.ಚಂದ್ರಮತಿ ಪ್ರಾರಂಭಿಸಿದರು.

ಆರ್.ಕಲ್ಯಾಣಮ್ಮನವರು 'ಸನ್ಮಾರ್ಗದರ್ಶಿನಿ' ಎಂಬ ಮಾಸಿಕ ಪತ್ರಿಕೆಯನ್ನು

೧೯೨೧ರಲ್ಲಿ ನಂಜನಗೂಡಿನಲ್ಲಿ ಹೊರತಂದರು.

೧೯೨೨ರಲ್ಲಿ ನಂಜನಗೂಡಿನ ತಿರುಮಲಾಂಬಾ 'ಭಾರತ ನಂದಿನಿ' ಎಂಬ ಮಾಸಿಕವನ್ನು ಪ್ರಾರಂಭಮಾಡಿ ಮಹಿಳೆಯರಿಗೂ ಪತ್ರಿಕೋದ್ಯಮಕ್ಕೂ ಬಲವಾದ ನಂಟು ಬೆಳೆಯಲು ದಾರಿಮಾಡಿಕೊಟ್ಟರು.

ಧಾರವಾಡದಲ್ಲಿ ೧೯೨೩ರಲ್ಲಿ ಸಿ.ಆರ್.ಚಂಡೂರಿ ಮಠ ಎನ್ನುವವರು 'ಮಹಿಳಾ' ಎನ್ನುವ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ನಂತರ ೧೯೩೯ರಲ್ಲಿ ಎಂ.ಸಿ. ಉಮಾಬಾಯಿ ಮೈಸೂರಿನಲ್ಲಿ 'ಮಹಿಳಾ ಪ್ರಕಾಶ' ಎನ್ನುವ ಮಾಸಿಕವನ್ನು ಹುಟ್ಟುಹಾಕಿದರು. ಅದನಂತರ ರುಕ್ಮಿಣಿಯಮ್ಮ ಬೆಂಗಳೂರಿನಲ್ಲಿ ೧೯೪೭ರಲ್ಲಿ 'ಪಾಂಚಜನ್ಯ' ಪತ್ರಿಕೆ ಹುಟ್ಟಲು ಕಾರಣರಾದರು.

೧೯೫೦ರಲ್ಲಿ ಇಬ್ಬರು ಮಹಿಳೆಯರು ಕೆ.ವಾರಿಜಾದೇವಿ ಮತ್ತು ಬಿ.ಮೋಹಿನಿದೇವಿ ಮಂಗಳೂರಿನಲ್ಲಿ 'ಸುವಾಸಿನಿ' ಎಂಬ ವಾರ ಪತ್ರಿಕೆಯನ್ನು ವನಿತೆಯರಿಗಾಗಿ ಪ್ರಾರಂಭಿಸಿದರು. ಅದೇ ವರ್ಷ 'ಸೋದರಿ' ಎಂಬ ಮಹಿಳಾ ಪತ್ರಿಕೆಯನ್ನು ಎಂ.ಆರ್.ಲಕ್ಷ್ಮಮ್ಮ ಬೆಂಗಳೂರಿನಲ್ಲಿ ಪ್ರಕಟಿಸಿದರು. ಅಂದಿನ ಖ್ಯಾತ ಸಮಾಜ ಕಾರ್ಯಕರ್ತೆ ಯಶೋಧರಾ ದಾಸಪ್ಪ 'ಗ್ರಾಮ ಸೇವಕಿ' ಎಂಬ ಪಾಕ್ಷಿಕವನ್ನು ಅರಸೀಕೆರೆಯಲ್ಲಿ ಆರಂಭಿಸಿದರು. 'ಭಾರತಿ' ಎನ್ನುವ ಮತ್ತೊಂದು ಪತ್ರಿಕೆ ೧೯೫೦ರಲ್ಲಿ ಕೆ.ಸಾವಿತ್ರಿಯವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿತು. ಅದೇ ವರ್ಷ ಮೈಸೂರಿನಲ್ಲಿ ಎಲ್.ವೈ.ಕಾವೇರಮ್ಮನವರು 'ಶಕ್ತಿ' ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭ ಮಾಡಿದ್ದಲ್ಲದೇ ಅದನ್ನು ೧೩ ವರ್ಷ ಸತತವಾಗಿ ಅವರೇ ನಡೆಸಿ ದಾಖಲೆ ಸ್ಥಾಪಿಸಿದ್ದಾರೆ. ಇದೊಂದು ಅತ್ಯಂತ ಶ್ಲಾಘನೀಯ ವಿಚಾರ.

ಭಾರತದ ಪತ್ರಿಕಾಕ್ಷೇತ್ರದಲ್ಲಿ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಳ್ಳಲು ಅವಕಾಶಕೊಡದಿದ್ದರೂ ಇಲ್ಲಿ ಪತ್ರಿಕೋದ್ಯಮ ಶಿಕ್ಷಣವನ್ನು ಮೊಟ್ಟಮೊದಲು ಪ್ರಾರಂಭಿಸಿದ ಕೀರ್ತಿ ಓರ್ವ ಮಹಿಳೆಗೆ ಸಲ್ಲುತ್ತದೆ. ಶ್ರೀಮತಿ ಆ್ಯನಿ ಬೆಸೆಂಟರು ೧೯೨೦ರಷ್ಟು ಮುಂಚೆಯೇ ಪತ್ರಿಕೋದ್ಯಮ ಶಿಕ್ಷಣವನ್ನು ಮದರಾಸಿನ ಅಡಿಯಾರ್‌ನಲ್ಲಿ ಪ್ರಾರಂಭಿಸಿದ್ದುದು ಅವರ ಪ್ರಗತಿಪರ ಮನೋಧರ್ಮವನ್ನು ತೋರಿಸುತ್ತದೆ. ನಂತರ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಭಾರತ ವಿಭಜನೆಯ ಮುಂಚೆ ಅಂದರೆ ೧೯೪೧ರಲ್ಲಿ ಪ್ರಪ್ರಥಮವಾಗಿ ಪ್ರತ್ಯೇಕವಾದ ಪತ್ರಿಕೋದ್ಯಮ ವಿಭಾಗವನ್ನು ಲಾಹೋರ್‌ನಲ್ಲಿ ಸ್ಥಾಪಿಸಲಾಯಿತು. ಅಲ್ಲಿ ಪತ್ರಿಕೋದ್ಯಮ

ಡಿಪ್ಲೊಮೊ ಪಡೆದ ೩೦ ವಿದ್ಯಾರ್ಥಿಗಳ ಮೊದಲ ತಂಡದಲ್ಲಿ ಜಬ್ ಉನ್ನಿಸ ಖರೇಷಿಯೆಂಬ ಓರ್ವ ವಿದ್ಯಾರ್ಥಿನಿ ಈ ಶಿಕ್ಷಣವನ್ನು ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಪಡೆದ ಪ್ರಥಮ ಮಹಿಳೆ. ಪತ್ರಿಕೋದ್ಯಮ ಶಿಕ್ಷಣದ ಕುರಿತು ೪೦ರ ದಶಕದಲ್ಲಿ ಮಹಿಳೆಯರಿಗೆ ಅದರಲ್ಲೂ ಒಂದು ಮುಸ್ಲಿಂ ಧರ್ಮದ ಹೆಣ್ಣುಮಗಳಿಗೆ ಅರಿವಿದ್ದುದು ಆಶ್ಚರ್ಯವನ್ನುಂಟು ಮಾಡುತ್ತದೆ.

ಹೇರಳವಾದ ಉದ್ಯೋಗವಕಾಶಗಳು ಹೆಚ್ಚು ಮಹಿಳೆಯರನ್ನು ಈ ಶಿಕ್ಷಣ ಕ್ಷೇತ್ರಕ್ಕೆ ಆಕರ್ಷಿಸಲು ಕಾರಣವಾಗಿದೆ. ಮಹಿಳೆಯರ ದೃಷ್ಟಿಯಿಂದ ಒಂದು ಕೊರತೆಯನ್ನು ಈ ವ್ಯವಸ್ಥೆಯಲ್ಲಿ ಕಾಣುತ್ತೇವೆ. ಅದೇನೆಂದರೆ ಈ ಶಿಕ್ಷಣ ಇನ್ನೂ ನಗರಗಳಿಗೇ ಸೀಮಿತವಾಗಿರುವುದು. ಇನ್ನೂ ಸಣ್ಣ ನಗರ ಅಥವಾ ಪಟ್ಟಣಗಳಲ್ಲಿ ಇದು ಲಭ್ಯವಿಲ್ಲದಿರುವುದರಿಂದ ನಗರದಲ್ಲಿನ ಮಹಿಳೆಯರು ಮಾತ್ರ ಈ ಶಿಕ್ಷಣದ ಲಾಭ ಪಡೆಯುತ್ತಿದ್ದಾರೆ. ಅಲ್ಲದೆ ಮತ್ತೊಂದು ಸಮಸ್ಯೆ ಏನೆಂದರೆ ಇಂದಿಗೂ ಪತ್ರಿಕೋದ್ಯಮ ಶಿಕ್ಷಣ ಮತ್ತು ತರಬೇತಿಯಲ್ಲಿ ಆಂಗ್ಲ ಭಾಷೆಗೆ ಹೆಚ್ಚು ಪ್ರಾತಿನಿಧ್ಯವಿದ್ದು ಗ್ರಾಮೀಣ ಪರಿಸರದಿಂದ ಬರುವ ಹೆಣ್ಣು ಮಕ್ಕಳು ಈ ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಉದ್ಯೋಗದ ದೃಷ್ಟಿಯಿಂದ ಪತ್ರಿಕೆಗಳಲ್ಲಿ ಮಹಿಳೆಯರಿಗೆ ಹೆಚ್ಚಿನ ಅವಕಾಶಗಳುಂಟು. ಉಪಸಂಪಾದಕರು ಮತ್ತು ವರದಿಗಾರರಾಗಿ ಮಹಿಳೆಯರು ಕಾರ್ಯನಿರ್ವಹಿಸಿದ್ದಾರೆ. ಉಪಸಂಪಾದಕರ ಕೆಲಸ ಪತ್ರಿಕಾ ಕಛೇರಿಗೆ ಸೀಮಿತವಾಗಿರುವುದರಿಂದ ಹೆಚ್ಚು ಹೆಚ್ಚು ಮಹಿಳೆಯರನ್ನು ಈ ಹುದ್ದೆ ಆಕರ್ಷಿಸಿದೆ. ಪತ್ರಿಕೆಗಳಲ್ಲಿ ರಾತ್ರಿಪಾಳಿಯಲ್ಲೂ ಕೆಲಸ ಮಾಡಬೇಕಾಗಿದ್ದು ಮಹಿಳೆಯರಿಗಾಗಿ ವಾಹನ ಸೌಕರ್ಯವನ್ನು ಏರ್ಪಡಿಸುತ್ತಾರೆ. ವರದಿಗಾರರಾಗಿಯೂ ಮಹಿಳೆಯರು ಕೆಲಸಮಾಡಲು ಒಲವು ತೋರಿದ್ದಾರೆ. ಬಹುತೇಕ ಮಹಿಳಾ ವರದಿಗಾರರಿಗೆ ದಿನನಿತ್ಯ ಸಾಮಾನ್ಯ ಸಭೆ ಸಮಾರಂಭಗಳನ್ನು ಮಾತ್ರ ವರದಿಮಾಡಲು ಅವಕಾಶವಿರುತ್ತದೆ. ಅಲ್ಲದೆ ಅತೀ ಸರಳವಾದ ಕಲೆ, ಸಂಸ್ಕೃತಿ ಮತ್ತು ಸಿನಿಮಾದಂತಹ ವಿಷಯಗಳ ವರದಿಗೆ ಇವರನ್ನು ಕಳುಹಿಸುವುದು ಪತ್ರಿಕೆಗಳಲ್ಲಿ ಸರ್ವೇಸಾಮಾನ್ಯ. ಖ್ಯಾತ ಪತ್ರಕರ್ತೆ ಕೂಮಿ ಕಪೂರ್ ಪ್ರಕಾರ ಮಹಿಳೆಯರಿಗೆ ನಾಯಿಗಳ ಪ್ರದರ್ಶನ, ಫಲಪುಷ್ಪ ಪ್ರದರ್ಶನ ಮತ್ತು ಬೆಲೆ ಏರಿಕೆ ವಿಷಯಗಳ ವರದಿಗಾಗಿ ಮಾತ್ರ ನಿಯೋಜಿಸುವ ಪರಿಪಾಠ ಈಗಲೂ ಇದೆ ಎಂದು ಟೀಕಿಸಿದ್ದಾರೆ. ಆದ್ದರಿಂದ ಪ್ರಮುಖ

ಕ್ಷೇತ್ರಗಳಾದ ರಾಜಕೀಯ, ಅಪರಾಧ, ಕಾನೂನು, ಗಲಭೆ ಮತ್ತು ಯುದ್ಧದಂತಹ ಸುದ್ದಿ ಕ್ಷೇತ್ರಗಳು ಇವತ್ತಿಗೂ ಪುರುಷ ಪ್ರಧಾನವಾಗಿವೆ. ಇದಕ್ಕೆ ಮಹಿಳೆಯರೂ ಬಹುಮಟ್ಟಿಗೆ ಕಾರಣ. ತಾವು ಸಂಪ್ರದಾಯ ಕುಟುಂಬದವರೆಂದು, ನ್ಯಾಯಾಲಯ, ಆರಕ್ಷಕ ಠಾಣೆ ಮತ್ತು ಗಲಭೆ ಸ್ಥಳಗಳಿಂದ ದೂರ ಸರಿವ ಮಹಿಳೆಯರಿಗೆ ಪ್ರಮುಖ ಸುದ್ದಿಗಳನ್ನು ವರದಿ ಮಾಡುವ ಅವಕಾಶಗಳು ಕಡಿಮೆ. ಇದಲ್ಲದೆ ಪ್ರತಿಷ್ಠಿತ ಸುದ್ದಿವರದಿಗಾರಿಕಾ ಕೆಲಸದಿಂದಲೂ ಮಹಿಳೆಯರನ್ನು ದೂರವಿಡಲಾಗುತ್ತಿದೆ. ವಿಧಾನಸಭೆ ಮತ್ತು ಲೋಕಸಭೆಯ ಕಲಾಪಗಳನ್ನು ವರದಿ ಮಾಡುವುದು ಇನ್ನೂ ಪುರುಷ ಪ್ರಧಾನವಾಗಿದೆ. ಬೆರಳೆಣಿಕೆಯಷ್ಟು ಮಹಿಳೆಯರು ಪ್ರಧಾನಮಂತ್ರಿಗಳ ಪತ್ರಿಕಾಗೋಷ್ಠಿ, ಪ್ರತಿಷ್ಠಿತ ಸಂದರ್ಭಗಳನ್ನು ವರದಿಮಾಡುತ್ತಾರೆ ವಿದೇಶಿ ಪ್ರವಾಸ ಮತ್ತು ವಿದೇಶ ನಾಯಕರ ಭೇಟಿಯಂತಹ ಸಂದರ್ಭಗಳಲ್ಲೂ ಪುರುಷ ಪತ್ರಕರ್ತರಿಗೆ ಆದ್ಯತೆ ನೀಡಲಾಗುತ್ತಿದೆ.

ಆದರೆ ಇತ್ತೀಚಿನ ದಿನಗಳಲ್ಲಿ ಮಹಿಳೆಯರೂ ತಮ್ಮ ಮಡಿತನವನ್ನು ಬದಿಗೊತ್ತಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸಕ್ರಿಯವಾಗಿ ಪತ್ರಕರ್ತರ ಹೊಣೆಗಾರಿಕೆಯನ್ನು ಹೊರುವ ಪ್ರಯತ್ನವನ್ನು ನೋಡುತ್ತಿದ್ದೇವೆ. ಈ ಪ್ರಯತ್ನದಲ್ಲಿ ಹಲವರಂತೂ ಅತ್ಯಂತ ಯಶಸ್ವಿಯಾಗಿ ಪತ್ರಿಕಾ ಕ್ಷೇತ್ರದಲ್ಲಿ ಮೈಲಿಗಲ್ಲುಗಳನ್ನು ನಿರ್ಮಿಸಿದ್ದಾರೆ.

ಕನ್ನಡ ಪತ್ರಿಕಾರಂಗದಲ್ಲಿ ಯಶಸ್ವಿಯಾಗಿರುವ ಮಹಿಳೆಯರು ಬೆರಳೆಣಿಕೆಯಷ್ಟು. ಪತ್ರಿಕೋದ್ಯಮ ಪದವಿಯನ್ನು ಕರ್ನಾಟಕದಲ್ಲಿ ಪಡೆದ ಪ್ರಥಮ ಮಹಿಳೆ ನಾಗಮಣಿ ಎಸ್.ರಾವ್. ಈಕೆಗೆ ಕರ್ನಾಟಕ ಪತ್ರಿಕಾ ಅಕಾಡೆಮಿಯಿಂದ ಪ್ರಶಸ್ತಿ ಕೂಡ ನೀಡಿ ಗೌರವಿಸಲಾಯಿತು. ರೇಡಿಯೋ ಸುದ್ದಿಯನ್ನು ಮಂಡಿಸುತ್ತಿದ್ದ ನಾಗಮಣಿ ಎಸ್.ರಾವ್. ರೇಡಿಯೊದ ಸ್ವರ್ಣ ಯುಗದಲ್ಲಿ ಮನೆಮಾತಾಗಿದ್ದರು. ಮಹಿಳೆಯರಿಗೆ ಸ್ಫೂರ್ತಿ ಮತ್ತು ಪ್ರೇರಣೆ ದೊರಕಿಸಿಕೊಟ್ಟವರಲ್ಲಿ ಪತ್ರಕರ್ತೆ ಫಿಲೋಮಿನಾ ಅವರು. 'ಪ್ರಜಾಮತ' ವಾರಪತ್ರಿಕೆಯಲ್ಲಿ ದುಡಿಯುತ್ತಿದ್ದ ಇವರು ಅನೇಕ ತನಿಖಾ ವರದಿ ವಿಶ್ಲೇಷಣೆಗೆ ಹೆಸರಾದವರು. ಕರ್ನಾಟಕದ ರಾಜ್ಯೋತ್ಸವದ ಪ್ರಶಸ್ತಿಗಳಿಸಿರುವ ಫಿಲೋಮಿನಾ ರಾಜ್ಯದ ಮಹಿಳಾ ಖೈದಿಗಳು ರಚಿಸಿರುವ 'ವಿಶೇಷ ಲೇಖನಗಳು' ಸರಕಾರದ ಕಣ್ಣು ತೆರೆಸಿದ್ದೇ ಅಲ್ಲದೇ ಅನೇಕ ಸೌಲಭ್ಯಗಳನ್ನು ಮಹಿಳಾ ಖೈದಿಗಳು ಪಡೆಯುವಂತೆ ಮಾಡಿದ

ಹೋರಾಟಗಾರ್ತಿ. 'ಪ್ರಜಾವಾಣಿ' ಬಳಗದಲ್ಲಿದ್ದ ಪೂರ್ಣಿಮಾ ಇನ್ನೊಬ್ಬ ಯಶಸ್ವಿ ಪತ್ರಕರ್ತೆಯಲ್ಲಿ ಪ್ರಮುಖರು. ಇವರ ಆದ್ಯತೆ ಕೃಷಿ ಮತ್ತು ಅಭಿವೃದ್ಧಿ, ಅವರ ವಿಶೇಷ ವರದಿಗಳಿಗೆ ಪ್ರಶಸ್ತಿ ಕೂಡ ಲಭಿಸಿದೆ. ಸಿನಿಮಾ ಪತ್ರಿಕೆಗಳಲ್ಲಿ ಡಾ.ವಿಜಯಾರವರ ಹೆಸರು ಚಿರಪರಿಚಿತ.

ಕನ್ನಡದಲ್ಲಿ ಮಹಿಳೆಯರು ಕಡಿಮೆ ಸಂಖ್ಯೆಯಲ್ಲಿದ್ದರೂ ಪ್ರತಿಷ್ಠಿತ ಸ್ಥಾನವನ್ನು ಅಲಂಕರಿಸಿರುವುದು ಹೆಮ್ಮೆಯ ಸಂಗತಿ. ಅಂತಹ ಗಣ್ಯರಲ್ಲಿ ಸಂಧ್ಯಾ ಪೈ ಪ್ರಮುಖರು. ಇವರು ಉದಯವಾಣಿ ಬಳಗದ ವ್ಯವಸ್ಥಾಪಕ ಸತೀಶ್ ಪೈರ ಹೆಂಡತಿ. ಇವರು ತಮ್ಮ ಬಳಗದ 'ತರಂಗ' ವಾರಪತ್ರಿಕೆಯ ವ್ಯವಸ್ಥಾಪಕ ಸಂಪಾದಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲದೇ ಇವರದೇ ಗುಂಪಿನ 'ಉದಯವಾಣಿ' ದಿನಪತ್ರಿಕೆಯ ಬೆಂಗಳೂರಿನ ಆವೃತ್ತಿಯನ್ನು ಒಬ್ಬ ಮಹಿಳೆಯ ಸಂಪಾದಕತ್ವದಲ್ಲಿ ನಡೆಯುತ್ತಿದೆ. ಡಾ.ಆರ್.ಪೂರ್ಣಿಮಾ ಇಂದು 'ಉದಯವಾಣಿ' ದಿನಪತ್ರಿಕೆಯ ಬೆಂಗಳೂರು ಆವೃತ್ತಿಯ ಸಂಪಾದಕರು. ಇವರು ಹಿಂದೆ ರಾಜ್ಯದ ಪ್ರತಿಷ್ಠಿತ ದಿನ ಪತ್ರಿಕೆ 'ಪ್ರಜಾವಾಣಿ'ಯಲ್ಲಿ ದುಡಿಯುತ್ತಿದ್ದರು.

'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆ ಕರ್ನಾಟಕ ರಾಜ್ಯದ ಉತ್ತರ ಕರ್ನಾಟಕದ ಜೀವನಾಡಿ. ಈ ಪತ್ರಿಕಾ ಬಳಗಕ್ಕೆ ಸೇರಿದ 'ಕರ್ಮವೀರ' ಮಾಸಿಕ ನಿಯತಕಾಲಿಕಗಳಲ್ಲಿ ಉತ್ತಮ ಶ್ರೇಣಿಯಲ್ಲಿರುಂವತಹದು. ಈ ಪತ್ರಿಕೆಯ ಸಂಪಾದಕತ್ವವನ್ನು ನಡೆಸುತ್ತಿರುವ ಕೆ.ಹೆಚ್.ಸಾವಿತ್ರಿಯವರು. ಅಲ್ಲದೇ 'ಪ್ರಜಾವಾಣಿ' ದಿನಪತ್ರಿಕೆಯ ಗುಂಪಿಗೆಸೇರಿದ ಮತ್ತೊಂದು ಪ್ರಖ್ಯಾತ ವಾರಪತ್ರಿಕೆ 'ಸುಧಾ'ದ ಉಪಸಂಪಾದಕಿ ಮಂಗಳ. 'ಲಂಕೇಶ್ ಪತ್ರಿಕೆ'ಯ ಸಂಪಾದಕತ್ವದ ಚುಕ್ಕಾಣಿಯನ್ನು ಹಿಡಿದಿರುವವರು ಅವರ ಪುತ್ರಿ ಗೌರಿ ಲಂಕೇಶ್. ಈಕೆ ಆಂಗ್ಲ ಭಾಷಾ ಪತ್ರಿಕೆಗಳಲ್ಲಿ ಮತ್ತು ಟಿ.ವಿ. ಪತ್ರಿಕೋದ್ಯಮದಲ್ಲಿ ಖ್ಯಾತಿಯನ್ನು ಪಡೆದಿದ್ದಾರೆ.

**ಜಾಹಿರಾತುಗಳು:**

ಜಾಹಿರಾತು ಉತ್ಪನ್ನಗಳನ್ನು ಮಾರಾಟ ಮಾಡಲು ಬಳಸುವ ಸಾಧನ. ಜಾಹಿರಾತಿಗೂ ಮಾಧ್ಯಮಕ್ಕೂ ನಿಕಟವಾದ ಸಂಬಂಧವಿದೆ. ಮಾಧ್ಯಮಕ್ಕೆ ಜಾಹಿರಾತೇ ಆರ್ಥಿಕ ಬುನಾದಿ. ಒಂದು ಮಾಧ್ಯಮ ಸ್ವತಂತ್ರವಾಗಿ ಕಾರ್ಯನಿರ್ವಹಿಸಬೇಕಾದಲ್ಲಿ ಜಾಹಿರಾತಿನ ಬೆಂಬಲ ಅಗತ್ಯ. ಪತ್ರಿಕೆಗಳಿಗೆ ಎರಡು ಮೂಲದಿಂದ ಆದಾಯವಿರುತ್ತದೆ. ಒಂದು ಪತ್ರಿಕಾ

ಮಾರಾಟದಿಂದ ಇನ್ನೊಂದು ಜಾಹಿರಾತಿನಿಂದ. ಈ ಎರಡರಲ್ಲಿ ಜಾಹಿರಾತಿನಿಂದ ಬರುವ ಆದಾಯವೇ ಹೆಚ್ಚಿನ ಪ್ರಮಾಣದ್ದು. ಜಾಹಿರಾತಿನ ಪ್ರಮಾಣ ಪ್ರಸಾರ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಲು ಪತ್ರಿಕೆಗಳು ನಿರಂತರವಾಗಿ ಪ್ರಯತ್ನ ನಡೆಸುತ್ತವೆ. ಆದಕ್ಕಾಗಿ ಅನೇಕ ರೀತಿಯ ಅಸ್ತ್ರಗಳನ್ನು ಬಳಸುತ್ತಾರೆ.

ಇಂದು ಭಾರತೀಯ ಜಾಹಿರಾತು ಗುಣಮಟ್ಟದಲ್ಲಿ ಉತ್ತಮದ್ದಾಗಿದೆ ಎನ್ನುವುದು ನಿರ್ವಿವಾದ. ಆದರೆ ಜಾಹಿರಾತಿನಲ್ಲಿ ಮಹಿಳೆಯರ ಚಿತ್ರಣದ ಬಗ್ಗೆ ವಾದ ವಿವಾದ ಇದೆ. ಎಲ್ಲಾ ಜಾಹಿರಾತಿಗೂ ಅವರ ಅವಶ್ಯಕತೆ ಇರಲಿ ಬಿಡಲಿ ಮಹಿಳೆಯರನ್ನು ಬಳಸಲಾಗುತ್ತಿದೆ. ಕಾರಿನ ಟೈರ್‌ನಿಂದ ಹಿಡಿದು ವಾಹನದ ತೈಲದವರೆಗೆ ಮಹಿಳೆಯರನ್ನು ಒಂದಲ್ಲಾ ಒಂದು ರೀತಿ ಬಳಸಲಾಗುತ್ತಿದೆ. ಜಾಹಿರಾತಿನಲ್ಲಿ ಮಹಿಳೆಯರ ದುರ್ಬಳಕೆ ಅವ್ಯಾಹಿತವಾಗಿ ಸಾಗಿದೆ. ಕನಿಷ್ಠ ಉಡುಪು ತೊಟ್ಟ ಮಹಿಳೆಯರು ಉದ್ರೇಕಕಾರಿ ಭಂಗಿಗಳಲ್ಲಿ ಅಂಗಾಂಗ ಪ್ರದರ್ಶನ ಮಾಡುವುದೇ ಇಂದಿನ ಜಾಹಿರಾತಿನ ಶೈಲಿ. ಮಹಿಳೆಯರನ್ನೇ ನಾಚಿಸುವಂತಹ ಪ್ರದರ್ಶನ ಭಾರತೀಯ ಜಾಹಿರಾತಿನಲ್ಲಿ ಹೆಚ್ಚಾಗಿ ಕಾಣಬರುತ್ತಿದೆ. ಮಾರುವ ಪದಾರ್ಥಕ್ಕೂ ಹೋಲುವ ವಿಷಯಕ್ಕೂ ಅವರು ತೋರಿಸುವ ಮಹಿಳೆಯರ ಚಿತ್ರಕ್ಕೂ ಯಾವ ಸಂಬಂಧವಿರುವುದಿಲ್ಲ. ಜಾಹಿರಾತಿನಲ್ಲಿ ಇಂದಿಗೂ ಮಹಿಳೆಯರನ್ನು ವ್ಯಾಪಾರೀಕರಣ ಮನೋಭಾವದಿಂದಲೇ ಪ್ರದರ್ಶಿಸಲಾಗುತ್ತಿದೆ.

ಮಹಿಳೆಯರನ್ನು ಶೃಂಗಾರ ಸಾಧನಗಳಾಗಿ ಹಾಗೂ ಭೋಗ ವಸ್ತುಗಳಾಗಿ ಚಿತ್ರಿಸಿರುವ ಜಾಹಿರಾತುಗಳಿಗೆ ಮಹಿಳೆಯರು ತಣ್ಣೀರೆರಚಿದ್ದಾರೆ. ಆದರೂ ಈ ವಿರೋಧಕ್ಕೆ ಮಣಿಯದೇ ಇತ್ತೀಚಿನ ದಿನಗಳಲ್ಲಿ ಜಾಹಿರಾತುದಾರರು ಮಹಿಳೆಯರ ವಿಷಯದಲ್ಲಿ ನೀತಿ ಸಂಹಿತೆಯನ್ನು ಗಾಳಿಗೆ ತೂರಿದ್ದಾರೆ. ಮಹಿಳೆಯರ ಚಿತ್ರವಿರದ ಜಾಹಿರಾತುಗಳೇ ವಿರಳ. ಜಾಹಿರಾತಿನಲ್ಲಿ ಮಹಿಳೆಯರನ್ನು ಅವಹೇಳನಕರವಾಗಿ ಚಿತ್ರಿಸುವುದು ಕಂಡುಬಂದಿದೆ. ಮಂದ ಬುದ್ಧಿಯವರು, ದುಂದು ವೆಚ್ಚಗಾರ್ತಿ ಹಾಗೂ ವ್ಯವಹಾರ ಜ್ಞಾನ ಕಡಿಮೆ ಎಂಬ ಭಾವನೆಯನ್ನು ಉಂಟು ಮಾಡುವ ಜಾಹಿರಾತುಗಳೇ ಹೇರಳವಾಗಿವೆ. ಮಹಿಳೆಯರಿಗೆ ನಮ್ಮ ಸಂಸ್ಕೃತಿಯಲ್ಲಿ ಪೂಜ್ಯ ಸ್ಥಾನ ಕೊಟ್ಟಿದ್ದೆವು. ಆದರೆ ಅಂತಹ ಸ್ಥಾನದ ಕಲ್ಪನೆ ಯಾವ ಜಾಹಿರಾತಿನಲ್ಲೂ ಕಾಣ ಸಿಗುವುದಿಲ್ಲ.

ಮಕ್ಕಳಿಗೆ ನೀಡಲಾಗುವ ಪೋಷಕಾಂಶದ ಪಾನೀಯಗಳಾದ Horlicks, Complan, Nutramol, Boost ಹಾಗೂ ಇನ್ನಿತ್ತರ ಬ್ರಾಂಡ್‌ಗಳು ಈ ಪದಾರ್ಥವನ್ನು ಗಂಡು ಮಕ್ಕಳಿಗಾಗಿ ಹೆಚ್ಚಾಗಿ ನೀಡುವ ಸಂಪ್ರದಾಯವನ್ನೇ ಚಿತ್ರಿಸುತ್ತದೆ. ಬೂಸ್ಟ್ ಜಾಹಿರಾತಿನಲ್ಲಿ 'ಬೂಸ್ಟ್ ಈಸ್ ದ ಸೀಕ್ರೇಟ್ ಆಫ್ ಅವರ್ ಎನರ್ಜಿ' ಎಂಬ ಘೋಷಣೆಯೊಂದಿಗೆ ಕ್ರಿಕೆಟ್ ಮಹಾತಾರೆ ಸಚಿನ್ ತೆಂಡೂಲ್ಕರ್ ಮತ್ತು ಒಬ್ಬ ಬಾಲಕನನ್ನು ತೋರಿಸಲಾಗುತ್ತದೆ. ಈ ಜಾಹಿರಾತಿನಲ್ಲಿ ಮತ್ತೊಬ್ಬ ಕ್ರಿಕೆಟ್ ತಾರೆ ಕಪಿಲ್ ದೇವ್‌ನೊಂದಿಗೆ ಬಾಲಕನನ್ನು ತೋರಿಸಲಾಗಿತ್ತು. ಅಂದರೆ ಶಕ್ತಿ, ಧೈರ್ಯ, ಪೈಪೋಟಿ ಹಾಗೂ ಬುದ್ಧಿವಂತಿಕೆ ಗಂಡು ಮಕ್ಕಳಿಗೆ ಅವಶ್ಯಕ ಮತ್ತು ಅದರ ಪೋಷಣೆಗೆ ಈ ಪಾನೀಯಗಳನ್ನು ಬಳಸುವುದು ಸೂಕ್ತ ಎನ್ನುವುದು ಈ ಜಾಹಿರಾತುಗಳ ವಾದ. ಲಿಂಗ ಅಸಮಾನತೆ ಜಾಹಿರಾತುಗಳಲ್ಲಿ ಹೆಚ್ಚಾಗಿ ಕಾಣುತ್ತಿದ್ದೇವೆ.

ಕೆಲವು ಜಾಹಿರಾತುಗಳಲ್ಲಿ ಚಿಕ್ಕ ಹೆಣ್ಣು ಮಕ್ಕಳನ್ನು ಅಡುಗೆಗೆ ಸಂಬಂಧಿಸಿದ ಕೆಲಸ ನಿರ್ವಹಿಸುವುದನ್ನು ಕಾಣುತ್ತೇವೆ. ಚಿಕ್ಕ ಚಿಕ್ಕ ಹೆಣ್ಣು ಮಕ್ಕಳು ತಮ್ಮ ತಮ್ಮಂದಿರು ಮತ್ತು ಅಣ್ಣಂದಿರಿಗೆ ಕಾಫಿ, ಟೀ, ಅಥವಾ ತಿಂಡಿಯನ್ನು ಕೊಡುವ ಚಿತ್ರಣ ಇದೆ. ಇದರಿಂದಾಗಿ ಮಕ್ಕಳಲ್ಲಿ ಅದರಲ್ಲೂ ಬಾಲಕರಲ್ಲಿ ಬಾಲಕಿಯರ ಬಗ್ಗೆ ತಾತ್ಸಾರ ಬೆಳೆಯುವುದು ಸಹಜ. ಅಷ್ಟೇ ಅಲ್ಲದೆ ಕೆಲವು ಜಾಹಿರಾತಿನಲ್ಲಿ ಮನೆ ಕೆಲಸದ ಸಂಪೂರ್ಣ ಜವಾಬ್ದಾರಿ ಮಹಿಳೆಯದ್ದೇ ಎಂದು ಚಿತ್ರಿಸಲಾಗಿದೆ. ಬಟ್ಟೆ ಒಗೆಯುವುದು, ಪಾತ್ರೆ ತೊಳೆಯುವುದು, ನೆಲ ಒರೆಸುವುದು ಅಡುಗೆ ಮಾಡುವುದು ಮತ್ತು ಇತ್ಯಾದಿ ಕೆಲಸಗಳೆಲ್ಲಾ ಮಹಿಳೆಯರಿಗೆ ಸೀಮಿತ ಎಂಬ ಅರ್ಥವನ್ನು ಕೊಡುತ್ತಿವೆ. ದುಡಿಯುವ ಮಹಿಳೆಯು ಕೂಡ ಇದರಿಂದ ಹೊರತಾಗಿಲ್ಲ.

ಇಂದು ಭಾರತೀಯ ಮಹಿಳೆಯರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಸಾಧನೆಗಳನ್ನು ಮಾಡಿದ್ದಾಗ್ಯೂ ಜಾಹಿರಾತಿನಲ್ಲಿ ಮಹಿಳೆಯರ ಪರಿಣತಿ ಮತ್ತು ಪ್ರಗತಿಪರ ಧೋರಣೆಯ ಚಿತ್ರಣ ಆಗಿಲ್ಲ. ಮಹಿಳೆಯರ ನೈಜ ಚಿತ್ರವನ್ನು ನಾವು ಎಂದೂ ಜಾಹಿರಾತಿನಲ್ಲಿ ಕಾಣುತ್ತಿಲ್ಲ. ಕೇವಲ ಪುರುಷರ ಜೊತೆ ಅಲಂಕಾರಿಕ ಚಿಹ್ನೆಗಳಾಗಿ ಮಾತ್ರ ಬಳಸಿಕೊಳ್ಳಲಾಗುತ್ತಿದೆ. ಜಾಹಿರಾತುಗಳಲ್ಲಿ ನಮ್ಮಲ್ಲಿರುವ ಕಲೆ ಮತ್ತು ಸಾಂಸ್ಕೃತಿಕ ಬಳಕೆ ಕೂಡ ತೃಪ್ತಿಕರವಾಗಿಲ್ಲ. ಮತ್ತು ಮಹಿಳೆಯರ ಚಿತ್ರೀಕರಣದಲ್ಲೂ ಹೆಚ್ಚಾಗಿ ಮೇಲ್ವರ್ಗದ ಮಹಿಳೆಯರ ಚಿತ್ರಣವೇ ಪ್ರಮುಖವಾಗಿದೆ. ಕೆಳ ವರ್ಗದ ಮಹಿಳೆಯರ ಜೀವನ ಶೈಲಿಯನ್ನು

ಜಾಹಿರಾತಿನಲ್ಲಿ ಮೂಡಿಸುವುದು ವಿರಳ.

## ದೂರದರ್ಶನ:

ಇಪ್ಪತ್ತನೇ ಶತಮಾನ ಕಂಡ ಅತ್ಯಂತ ಪರಿಣಾಮಕಾರಿ ಮಾಧ್ಯಮಗಳಲ್ಲಿ ಟಿ.ವಿ. ಪ್ರಮುಖವಾದುದು. ಸಿನಿಮಾ ಮತ್ತು ರೇಡಿಯೊ ಪ್ರಚಲಿತವಾಗಿದ್ದ ಕಾಲದಲ್ಲಿ ಟಿ.ವಿಯ ಆಗಮನ ಜನರನ್ನು ಸೂಜಿಗಲ್ಲಿನಂತೆ ತನ್ನೆಡೆ ಆಕರ್ಷಿಸಿತು. ಕಳೆದ ಶತಮಾನದ ಎರಡನೇ ದಶಕದಲ್ಲಿ ರೇಡಿಯೋದ ಉಗಮ ಮತ್ತು ನಂತರ ಅದರ ಶೀಘ್ರ ಬೆಳವಣಿಗೆ ಸಂಪರ್ಕ ಕ್ಷೇತ್ರದಲ್ಲಿ ಅಪಾರ ಬದಲಾವಣೆಗೆ ಕಾರಣವಾಯಿತು. ಅನಕ್ಷರಸ್ಥ ಜನರನ್ನೂ ಮುಟ್ಟಿತ್ತು.

೧೯೪೦ರ ದಶಕದಲ್ಲಿಯೇ ಟಿ.ವಿ.ಯು ರೇಡಿಯೊ ಮಾಧ್ಯಮ ಜನಪ್ರಿಯತೆಯ ತುತ್ತತುದಿಯಲ್ಲಿದ್ದಾಗ ಬಳಕೆಗೆ ಬಂದಿತು. ಅನೇಕ ಅನ್ವೇಷಣೆಗಳ ಒಟ್ಟಾರೆಯ ಫಲ ಟಿ.ವಿ. ಇದರ ಉಗಮದಿಂದ ಜನ ಚಕಿತರಾದರು. ಕೇವಲ ಸಿನಿಮಾವನ್ನು ನೋಡಿದ್ದ ಜನರು ಟಿ.ವಿಯನ್ನು ಕಂಡು ಮೂಕವಿಸ್ಮಿತರಾದರು. ಜಗತ್ತು ಕಂಡರಿಯಿದ ಟಿ.ವಿ ಅಥವಾ ದೂರದರ್ಶನ ಮನೆಯಲ್ಲೇ ಕುಳಿತು ಚಲಿಸುವ ಚಿತ್ರಗಳನ್ನು ಮತ್ತು ಶಬ್ದಗಳನ್ನು ನೋಡ ಬಹುದಾದ ವ್ಯವಸ್ಥೆ ಜನರ ಕಲ್ಪನೆಗೂ ಮೀರಿತ್ತು. ಅಂತಹ ಮಾಧ್ಯಮ ಭಾರತಕ್ಕೆ ಬಂದದ್ದು ಸೆಪ್ಟೆಂಬರ್ ೧೫, ೧೯೫೯ರಲ್ಲಿ ನವದೆಹಲಿಯಲ್ಲಿ. ಇದು ಪ್ರಾರಂಭವಾದದ್ದು ಒಂದು ಪ್ರಯೋಗಾತ್ಮಕವಾಗಿ. ಟಿ.ವಿ. ಸೆಟ್‌ಗಳನ್ನು ಕೂಡ ಭಾರತ ಸರಕಾರವೇ ಒದಗಿಸಿ ಜನರಿಗಾಗಿ ಟಿ.ವಿ.ಕ್ಲಬ್‌ಗಳನ್ನು ನಿರ್ಮಿಸಿತು. ಇಲ್ಲಿ ಜನರು ಒಟ್ಟಾಗಿ ಕಲೆತು ಟಿ.ವಿ. ಪ್ರಸಾರವನ್ನು ನೋಡುತ್ತಿದ್ದರು. ಇಂತಹ ಮಾಧ್ಯಮ ಜನರನ್ನು ಮೋಡಿಮಾಡಿತು. ಸರಕಾರ ಇದರ ಪ್ರಕಾರವಾಗಿಯೇ ನೀತಿ ನಿಯಮಗಳನ್ನು ರೂಪಿಸಿತು. ಅತ್ಯಂತ ಕಡಿಮೆ ಅವಧಿಯಲ್ಲಿ ಭಾರದಲ್ಲಿ ಟಿ.ವಿ. ಜಾಲದ ವ್ಯಾಪ್ತಿ ಹರಡಿತು. ಒಟ್ಟಾರೆ ಇಂದು ಕೇಂದ್ರದ ದೂರದರ್ಶನವೂ ಸೇರಿದಂತೆ ಸುಮಾರು ೧೦೦-೧೨೦ ಟಿ.ವಿ. ಛಾನಲ್‌ಗಳು ಲಭ್ಯ.

ಮಹಿಳೆಯರ ಮೇಲೆ ಹೆಚ್ಚಿನ ಪ್ರಭಾವ ಬೀರಿದ ಸಾಧನ ಟಿ.ವಿ. ಸಿನಿಮಾ ಭಾರತೀಯ ಮಹಿಳೆಯರು ಇವನ್ನು ಸಂಪೂರ್ಣವಾಗಿ ಮನರಂಜನ ಮಾಧ್ಯಮವಾಗಿ ಒಪ್ಪಿಕೊಂಡಿದ್ದಾರೆ. ಈ ಮಾಧ್ಯಮ ಮಹಿಳೆಯರ ಜೀವನದಲ್ಲಿ ಬದಲಾವಣೆ ತಂದಷ್ಟು ಬೇರೆ ಯಾವುದೇ ಮಾಧ್ಯಮಗಳಿಂದ ಸಾಧ್ಯವಾಗಿಲ್ಲ.

ಟಿ.ವಿ. ನಮ್ಮ ಸಮಾಜದ ಮೇಲೆ ಮತ್ತು ಸಂಸ್ಕೃತಿಯ ಮೇಲೆ ಹಾನಿಕಾರಕ ಪ್ರಭಾವ ಬೀರಿದೆ ಮತ್ತು ಇದು ಮಹಿಳೆಯರನ್ನು ಮತ್ತು ಯುವ ಜನತೆಯ ಬದುಕಿನ ಹಾದಿ ತಪ್ಪಿಸುತ್ತಿದೆ ಎನ್ನುವ ಟೀಕೆಗಳು ಹೇರಳವಾಗಿವೆ. ಟಿ.ವಿ.ಯ ಬಗ್ಗೆ ಜನರಲ್ಲಿ ಇಂದು ಒಳ್ಳೆಯ ಅಭಿಪ್ರಾಯ ಕಡಿಮೆಯಾಗುತ್ತಿದೆ. ಏಕೆಂದರೆ ಬಹಳಷ್ಟು ಮಹಿಳೆಯರು ಟಿ.ವಿ ವೀಕ್ಷಣೆಯಲ್ಲೇ ತಮ್ಮ ವೇಳೆ ಕಳೆಯುತ್ತಿದ್ದಾರೆ ಎನ್ನುವ ಆಪಾದನೆ ಇದೆ. ಇದು ಸತ್ಯವೂ ಹೌದು. ಇಂದು ಗೃಹಣಿಯರು ದಿನದ ಹೆಚ್ಚು ಕಾಲ ಟಿ.ವಿ. ಧಾರಾವಾಹಿಗಳನ್ನು ನೋಡುವುದರಲ್ಲಿ ಮತ್ತು ಟಿ.ವಿಯಲ್ಲಿ ಪ್ರಸಾರವಾಗುವ ಕೇಬಲ್ ಸಿನಿಮಾಗಳ ವೀಕ್ಷಣೆಯಲ್ಲೇ ಕಳೆಯುತ್ತಿದ್ದಾರೆ ಎಂದು ದೂರಿದೆ. ಟಿ.ವಿ. ಧಾರವಾಹಿಗಳಿಂದ ಮಹಿಳೆಯರು ಮನೆಯನ್ನು ಮತ್ತು ಕುಟುಂಬವನ್ನು ನಿರ್ಲಕ್ಷಿಸುತ್ತಿದ್ದಾರೆ ಎನ್ನುವ ಟೀಕೆ ಕೂಡ ಇದೆ.

ಇದು ಮಹಿಳೆಯರನ್ನು ಪುನಃ ಅಡಿಗೆ ಕೋಣೆಗೆ ಸೀಮಿತಗೊಳಿಸುವ ಪ್ರಯತ್ನ ಮಾಡಿದೆ. ತುಕ್ಕು ಹಿಡಿದ ಮೌಲ್ಯಗಳನ್ನು ಪುನಃ ಚಲಾವಣೆಗೆ ತರುವ ಈ ಪ್ರವೃತ್ತಿ ಮಹಿಳಾ ಸಬಲೀಕರಣದ ಹೋರಾಟಕ್ಕೆ ಮಾರಕವಾಗಲಿದೆ. ಇಂದು ಮಹಿಳೆ ಮನೆಯ ಹೊರಗೂ ಒಳಗೂ ದುಡಿಯುವ ಅನಿವಾರ್ಯತೆ ಇದೆ. ಆಕೆ ತನ್ನ ವ್ಯಕ್ತಿತ್ವವನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳಲು ಅನುಕೂಲಗಳಿವೆ ಮತ್ತು ಅವಕಾಶಗಳಿವೆ.

ಇತ್ತೀಚೆಗೆ ಪ್ರಸಾರವಾಗುತ್ತಿರುವ ಕನ್ನಡದ ಧಾರವಾಹಿಗಳಲ್ಲೂ ವಿಧವೆಯರನ್ನು ಚಿತ್ರಿಸಿರುವ ರೀತಿ ಅವಹೇಳನಕಾರಿಯಾಗಿದೆ. ಒಂದು ಧಾರವಾಹಿಯಲ್ಲಿ ಬಿಳಿಸೀರೆಯ ಯೂನಿಫಾರಂ ಅನ್ನು ವಿಧವೆಗೆ ತೊಡಿಸಿ ನಿರ್ಮಾಪಕರು ಬಹುಶಃ ಪಾತ್ರದಾರಿಯ ಉಡುಗೆ ತೊಡುಗೆಯಲ್ಲಿ ಹಣ ಉಳಿಸಿರಬಹುದು. ಆದರೆ ಅವರ ಪಾತ್ರ ಚಿತ್ರಣವನ್ನು ವಿಧವೆಯರೇ ನೋಡಿದಾಗ ಎಂತಹ ನೋವು ಆ ಉಡುಗೆ ನೀಡುತ್ತದೆ ಎಂಬ ಕಲ್ಪನೆ ಕೂಡ ನಿರ್ಮಾಪಕರಿಗಿದ್ದಂತಿಲ್ಲ. ನಮ್ಮ ಸುತ್ತ ಮುತ್ತಲಿನ ಸಮುದಾಯದಲ್ಲಿ ವಿಧವೆಯರು ಇತರ ಮಹಿಳೆಯರಂತೆ ಅಲಂಕಾರ ಮಾಡಿಕೊಳ್ಳುವಷ್ಟು ಮಟ್ಟಿಗೆ ನಾವು ನಾಗರೀಕರಾಗಿದ್ದೇವೆ. ಆದರೆ ಈ ಧಾರಾವಾಹಿಗಳಲ್ಲಿ ವಿಧವೆಯರ ಮೇಲೆ ಕ್ರೂರ ರೀತಿಯಲ್ಲಿ ಸಂಪ್ರದಾಯವನ್ನು ಹೇರುವುದು ಸರಿಯಲ್ಲ.

ಟಿ.ವಿ ಮಾಧ್ಯಮದಲ್ಲಿ ಇತ್ತೀಚೆಗೆ ಪ್ರಸಾರವಾಗುತ್ತಿರುವ ಜಾಹಿರಾತುಗಳದ್ದೇ ಒಂದು ಪ್ರತ್ಯೇಕ ಲೋಕ. ಅವುಗಳಲ್ಲಿ ಮಹಿಳೆಯರ ದುರ್ಬಳಕೆ ಎಲ್ಲೆ ಮೀರಿದೆ. ಮೈ ಸಾಬೂನಿನ

ಜಾಹಿರಾತುಗಳಂತೂ ಮಹಿಳೆಯರು ಸ್ನಾನ ಮಾಡುವ ಶೈಲಿಯ ಪ್ರದರ್ಶನವೋ ಎಂಬ ಸಂಶಯ ಬರುತ್ತದೆ.

ಆದರೆ ಟಿ.ವಿ. ಮಾಧ್ಯಮ ಸಂಪೂರ್ಣವಾಗಿ ಮಹಿಳೆಯರಿಗೆ ಕೆಡುಕನ್ನು ಉಂಟುಮಾಡಿದೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಬದಲಾಗುತ್ತಿರುವ ಮೌಲ್ಯಗಳನ್ನೂ ಕೂಡ ಟಿ.ವಿ ಜಾಹಿರಾತುಗಳು ಸ್ವಲ್ಪಮಟ್ಟಿಗೆ ಚಿತ್ರಿಸಿದೆ. ಅವುಗಳಲ್ಲಿ ಪ್ರಮುಖವಾದದ್ದು ಮಹಿಳೆಯ ಎರಡು ಮುಖಗಳನ್ನು, ಅಂದರೆ ಗೃಹಿಣಿಯಾಗಿ ಮತ್ತು ದುಡಿಯುವ ಮಹಿಳೆಯಾಗಿ ಆಕೆಗೊಂದು ಬೇರೆ ವ್ಯಕ್ತಿತ್ವವನ್ನು ಜಾಹಿರಾತುಗಳು ಗುರುತಿಸಿರುವುದು. ಆದರೆ ಬಹಳಷ್ಟು ಜಾಹಿರಾತುಗಳಲ್ಲಿ ಹಳೆಯದನ್ನೇ ಆಧರಿಸಿ ಮಹಿಳೆಯನ್ನು ಚಿತ್ರಿಸಿವೆ. ಒಂದು ಉದಾಹರಣೆ ಹೇಳಬೇಕೆಂದರೆ 'ಮೂ' ಎನ್ನುವ ಬ್ರಾಂಡ್ ಮೈಕೈನೋವಿಗೆ ಬಳಸುವ ಮದ್ದು. ಈ ಜಾಹಿರಾತಿನಲ್ಲಿ ಮನೆಯವರೆಲ್ಲರ ಅಣತಿಯಂತೆ ದುಡಿಯುವ ಮಹಿಳೆಗೆ ಸೊಂಟ ಹಿಡಿದಾಗ ಈ ಮಾರಾಟಕ್ಕಿರುವ ಪದಾರ್ಥವನ್ನು ಮನೆಯವರೆಲ್ಲಾ ಆಕೆಗೆ ಶಿಫಾರಸ್ಸು ಮಾಡುತ್ತಾರೆ ವಿನಃ ಆಕೆಯ ಕೆಲಸವನ್ನೇನು ಯಾರೂ ಹಂಚಿಕೊಳ್ಳುವುದಿಲ್ಲ.

ಮಕ್ಕಳಲ್ಲಿ ಅದರಲ್ಲೂ ಹೆಣ್ಣು ಮಕ್ಕಳಿಗೆ ವಿರುದ್ಧವಾದ ಜಾಹಿರಾತುಗಳಲ್ಲಿ ಮೈ ಬಣ್ಣವನ್ನು ಕಪ್ಪಿನಿಂದ ಬಿಳಿ ಬಣ್ಣಕ್ಕೆ ಬದಲಾಯಿಸುವ ಕ್ರೀಮ್‌ಗಳು ಪ್ರಮುಖವಾದವು. ಹೆಣ್ಣು ಮಕ್ಕಳಿಗೆ ವಿವಾಹವಾಗಬೇಕಿದ್ದರೆ ಅವರ ಬಣ್ಣ ಮುಖ್ಯ ಎಂಬ ಪರಿಕಲ್ಪನೆಯನ್ನು ಜಾಹಿರಾತುಗಳು ಸುಮಾರು ಎರಡು ದಶಕಗಳಿಂದ ಹುಟ್ಟುಹಾಕಿದ್ದು ಅವು ಇಂದಿಗೂ ಚಾಲನೆಯಲ್ಲಿವೆ. ಇದರಿಂದ ಹೆಣ್ಣು ಮಕ್ಕಳಿಗೆ ಕೀಳರಿಮೆ ಉಂಟಾಗಿ ಆತ್ಮಸ್ಥೈರ್ಯವನ್ನು ಕಳೆದುಕೊಳ್ಳುವ ಪರಿಸ್ಥಿತಿಯಿಂದಾಗಿ ಅಂತಹ ಹೆಣ್ಣು ಮಕ್ಕಳ ತಂದೆ ತಾಯಿಗಳು ಕೂಡ ಮಕ್ಕಳ ಬಣ್ಣದ ಬಗ್ಗೆ ಯೋಚಿಸುವಂತೆ ಮಾಡಿದೆ.

ಮಾಧ್ಯಮಗಳಲ್ಲಿ ಮಹಿಳೆಯರ ದುರ್ಬಳಕೆಯ ಪ್ರಸಾರವನ್ನು ನಿಗ್ರಹಿಸಲು ಕೇಂದ್ರ ಸರಕಾರವು ೧೯೮೬ರಲ್ಲಿ ಒಂದು ಮಸೂದೆಯನ್ನು ಕಾರ್ಯರೂಪಕ್ಕೆ ತಂದಿತು. ಅದು The Indecent Representation of Women (Prohibition) Act ೧೯೮೬

ಈ ಮಸೂದೆಯ ಪ್ರಕಾರ ಮಹಿಳೆಯರನ್ನು ಮತ್ತು ಅವರ ಶರೀರವನ್ನು ಅಥವಾ ಯಾವುದೇ ಅಂಗವನ್ನು ಅವಹೇಳನಕಾರಿಯಾಗಿ ಅಥವಾ ಅಶ್ಲೀಲವಾಗಿ, ಆಕ್ಷೇಪನಾರ್ಹವಾಗಿ, ಸಾರ್ವಜನಿಕ ಹಿತಾಸಕ್ತಿಗೆ ಮತ್ತು ಮೌಲ್ಯಗಳಿಗೆ ವಿರುದ್ಧವಾಗಿ

ಚಿತ್ರಿಸುವುದನ್ನು ನಿಷೇಧಿಸಿದೆ. ಇದು ಜಾಹಿರಾತು, ಪತ್ರಿಕಾ ಬರಹ ಮತ್ತು ಚಿತ್ರ, ಚಲನಚಿತ್ರ ಪ್ರದರ್ಶನ, ಛಾಯಾಚಿತ್ರ, ಭಿತ್ತಿಚಿತ್ರ, ಪುಸ್ತಕ ಮತ್ತು ಇನ್ನಿತರ ಮಾಧ್ಯಮಗಳಿಗೆ ಅನ್ವಯಿಸುತ್ತದೆ. ಇದನ್ನು ಉಲ್ಲಂಘಿಸಿದವರಿಗೆ ಎರಡು ವರ್ಷ ಕಠಿಣ ಸಜೆ ಮತ್ತು ರೂ ೨೦೦೦ ಜುಲ್ಮಾನೆ ವಿಧಿಸಲಾಗುತ್ತಿದೆ.

ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ಕೂಡ ಜಾಹಿರಾತುಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ನೀತಿ ಸಂಹಿತೆಯನ್ನು ಜಾರಿಗೆ ತಂದಿದ್ದಾರೆ. ಇಲ್ಲೂ ಕೂಡ ಮಹಿಳೆಯರನ್ನು ಅವಹೇಳನಕಾರಿಯಾಗಿ ಮತ್ತು ಅಶ್ಲೀಲವಾಗಿ ಚಿತ್ರಿಸುವುದನ್ನು ನಿಷೇಧಿಸಲಾಗಿದೆ.

**ಆಕಾಶವಾಣಿ:**

ಒಂದು ಕಾಲದಲ್ಲಿ ಸುದ್ದಿಗಳನ್ನು ಉದ್ಯಾನವನಗಳಲ್ಲಿ ಅಳವಡಿಸುತ್ತಿದ್ದ ರೇಡಿಯೊ ಧ್ವನಿವರ್ಧಕಗಳ ಮೂಲಕ ಕೇಳುತ್ತಿದ್ದ ಹಿರಿಯರಿದ್ದಾರೆ. ಆಕಾಶವಾಣಿ ಇಂದಿನ ದೂರದರ್ಶನ, ಕಂಪ್ಯೂಟರ್‌ಗಿಂತ ಮೊದಲು ಶ್ರೋತೃಗಳ ಮನಸ್ಸನ್ನು ರಂಜಿಸಿ, ವೈಚಾರಿಕತೆ ಬೆಳೆಸಿ ಆಧುನಿಕ ಸುದ್ದಿಜಾಲಗಳಾಗಿ ಮೆರೆಯುತ್ತಿತ್ತು. ಆದರ ಹೆಸರು ಅನ್ವರ್ಥವಾಗುವಂತೆ ಆಕಾಶವಾಣಿ ಮಹಿಳೆಯರಿಗೆ ಅತ್ಯುತ್ತಮ ಮನರಂಜನಾ ಸಾಧನವಾಗಿತ್ತು. ಈಗಲೂ ಮಹಿಳೆಯರಿಗೆಂದೇ ಹೊಸ ಹೊಸ ಕಾರ್ಯಕ್ರಮ ನಡೆಸುತ್ತ ಯಶಸ್ವಿಯಾಗಿರುವ ಆಕಾಶವಾಣಿ ಮಹಿಳೆಯರ ಘನತೆ, ಸ್ಥಾನಮಾನ ಇತ್ಯಾದಿಗಳ ಬಗ್ಗೆ ಸಾಕಷ್ಟು ಉತ್ತಮ ಸೇವೆಸಲ್ಲಿಸುತ್ತಿದೆ. ಮಹಿಳಾ ಉದ್ಯಮಿಗಳನ್ನು ಸಂದರ್ಶಿಸುವ ಮೂಲಕ ಆರ್ಥಿಕ ಸ್ವಾವಲಂಬನೆಗೆ ಮಹಿಳೆಯರನ್ನು ಆಕರ್ಷಿಸುತ್ತಿದೆ. ಮನರಂಜನೆಯೇ ಮುಖ್ಯ ಉದ್ದೇಶವಾಗಿ ಜನ್ಮ ತಳೆದ ಆಕಾಶವಾಣಿ ಜನರ ಮನವನ್ನು ಸೂರೆಗೊಳ್ಳುತ್ತ ಸ್ತ್ರೀಯರಿಗೆ ಹೆಚ್ಚು ಹೆಚ್ಚು ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಮಾಡುತ್ತಿದೆ. ವಿವಿಧ ಬಾನುಲಿ ವಾಹಿನಿಗಳ ಮೂಲಕ ವಾಣಿಜ್ಯ ಪ್ರಸಾರವನ್ನೂ ಮಾಡುತ್ತ ಜಾಹೀರಾತು ಮತ್ತು ಮಹಿಳೆ ಇಬ್ಬರನ್ನೂ ಸಾಕಷ್ಟು ಉತ್ತಮ ರೀತಿಯಲ್ಲಿ ಬಳಸಿಕೊಂಡಿದೆ. ಸ್ತ್ರೀ ವಿದ್ಯಾಭ್ಯಾಸ, ವಿಜ್ಞಾನ, ತಂತ್ರಜ್ಞಾನ, ಆಧ್ಯಾತ್ಮಿಕ, ಇತಿಹಾಸ, ಸಮಾಚಾರ ಎಲ್ಲ ದೃಷ್ಟಿಯಿಂದಲೂ ಆಕಾಶವಾಣಿಯ ಸೇವೆ ಸ್ತುತ್ಯರ್ಹವಾಗಿದೆ. ಇದೀಗ ಆಕಾಶವಾಣಿಯ ಮೂಲಕ ತಮ್ಮ ಕಂಠಶ್ರೀಯನ್ನು ಗಾಳಿಯಲ್ಲಿ ತೇಲಿಬಿಡುತ್ತಿರುವ ಮಹಿಳೆಯರು ದೂರದರ್ಶನದಂಥ ಪ್ರಬಲ ಮಾಧ್ಯಮಕ್ಕಿಂತಲೂ ಹೆಚ್ಚು

ಜನಪ್ರಿಯಗೊಂಡಿದ್ದಾರೆ. ಸ್ತ್ರೀಯರ ವಿಶೇಷ ಕಾರ್ಯಕ್ರಮ, ಸಂದರ್ಶನ, ಚರ್ಚೆಗಳಿಂದಾಗಿ ಆಕಾಶವಾಣಿ ಮಹಿಳಾ ಜಾಗೃತಿಯಲ್ಲಿ ಅತ್ಯುತ್ತಮವಾಗಿ ಸ್ಪಂದಿಸುತ್ತಿದೆ.

## ಅಡಿ ಟಿಪ್ಪಣಿಗಳು:

೧. ಚ.ನ.ಶಂಕರ್‌ರಾವ್. ಭಾರತೀಯ ಸಮಾಜ. ಪುಟ-೧೮೭

೨. ಡಾ|| ಗೀತಾ ಶೆಣ್ಯೆ. ಸ್ತ್ರೀ ವಿಮುಕ್ತಿ ಚಿಂತನೆ - ಒಂದು ಅಧ್ಯಯನ. ಪುಟ - ೩೫

೩. ಚ.ನ.ಶಂಕರ್‌ರಾವ್. ಭಾರತೀಯ ಸಮಾಜ. ಪುಟ-೧೮೭

೪. ಅದೇ ಪುಟ - ೧೮೭

೫. ಸಂಪಾದಕ ಡಾ|| ರಾಗೌ. ಮಹಿಳಾ ಅಧ್ಯಯನ ಆಯಾಮಗಳು. ಪುಟ - ೪೦೮

೬. ಅದೇ. ಪುಟ - ೩೪೧



# ಅಧ್ಯಾಯ: ೬

# ಮಹಿಳಾ (ಸಶಕ್ತೀಕರಣ) ಸಬಲೀಕರಣ

ಲಿಂಗತಾರತಮ್ಯತೆ, ಅಸಮಾನತೆ, ಅನರ್ಹತೆ ಹಾಗೂ ಇನ್ನಿತರ ಬಗೆಯ ಸಂಕಷ್ಟಗಳಿಗೆ ಒಳಗಾಗಿರುವ ಸ್ತ್ರೀಯರಿಗೂ ಕೂಡ ಪುರುಷರಿಗೆ ಸರಿ ಸಮಾನವಾದ ಅಂತಸ್ತು ಹಾಗೂ ಅವಕಾಶಗಳನ್ನು ನೀಡಿ ಅವರನ್ನು ಸಶಕ್ತರನ್ನಾಗಿಸಲು ಹಮ್ಮಿಕೊಳ್ಳಲಾಗಿರುವ ಅಭಿವೃದ್ಧಾತ್ಮಕ ಕಾರ್ಯಯೋಜನೆಗಳ ಪ್ರಕ್ರಿಯೆಯನ್ನು 'ಮಹಿಳಾ ಸಶಕ್ತೀಕರಣ' ಪ್ರಕ್ರಿಯೆ ಎಂದೆನ್ನಬಹುದು.

'ಮಹಿಳಾ ಸಶಕ್ತೀಕರಣ' ವೆಂದರೆ ಸ್ತ್ರೀಯರಿಗೆ ತಮ್ಮ ಜೀವನವನ್ನು ನಿಯಂತ್ರಿಸುತ್ತಾ ಬಂದಿರುವ ಇತರರಿಂದ ಮುಕ್ತಿ ಪಡೆದುಕೊಳ್ಳಲು ಹಾಗೂ ತಮ್ಮ ಜೀವನವನ್ನು ಮತ್ತು ಆದಕ್ಕೆ ಸಂಬಂಧಿಸಿದ ಪರಿಸ್ಥಿತಿಗಳನ್ನು ತಾವೇ ನಿಯಂತ್ರಿಸಿಕೊಳ್ಳಲು ಸೂಕ್ತವಾದ ಶಕ್ತಿಯನ್ನು ನೀಡುವುದೆಂದರ್ಥ.

## ಮಹಿಳಾ ಸಶಕ್ತೀಕರಣ ಆರಂಭಗೊಂಡಿದ್ದರ ಹಿನ್ನೆಲೆ:

ಇತಿಹಾಸದುದ್ದಕ್ಕೂ ಸ್ತ್ರೀಯರನ್ನು 'ಅಬಲೆಯರು' ಅಥವಾ 'ದುರ್ಬಲರು' ಎಂದು ಪರಿಗಣಿಸಲಾಗಿತ್ತಲ್ಲದೆ ಅವರನ್ನು 'ದ್ವಿತೀಯ ದರ್ಜೆಯ ಪ್ರಜೆಗಳು' ಎಂಬಂತೆಯೇ ನೋಡಿಕೊಳ್ಳಲಾಗುತ್ತಿತ್ತು. ಕುಟುಂಬ ನಿರ್ವಹಣೆಯ ಜವಾಬ್ದಾರಿ ಹೊತ್ತವರು ಎಂಬ ಅರ್ಥದಲ್ಲಿ ಅವರನ್ನು 'ಮನೆ ನಿರ್ಮಾತೃಗಳು' ಎಂದು ಕೂಡಾ ಕರೆಯುವುದಿತ್ತು. ಕಾಲ ಸರಿದಂತೆ ಸ್ತ್ರೀಯರ ಬಗೆಗಿನ ದೃಷ್ಟಿಕೋನ ಬದಲಾಯಿತು. ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಬ್ರಿಟನ್ ಮತ್ತು ಅಮೆರಿಕಾಗಳಲ್ಲಿ ಸ್ತ್ರೀಯರಿಗೂ ಮತದಾನದ ಸಮಾನ ಹಕ್ಕನ್ನು ನೀಡಿದ ಮೇಲಂತೂ ಪಶ್ಚಿಮದ ಸಮಾಜಗಳಲ್ಲಿ ಅವರ ಅಂತಸ್ತಿನಲ್ಲಿ ತುಂಬಾ ಸುಧಾರಣೆಯಾಯಿತು. ಹೆಚ್ಚಿನ ಕ್ಷೇತ್ರಗಳಲ್ಲಿಪುರುಷರಿಗೆ ಸರಿಸಮಾನವಾದ ಅವಕಾಶ ಹಕ್ಕುಗಳನ್ನು ಸ್ತ್ರೀಯರಿಗೂ ನೀಡಲಾಯಿತು.

ಆದರೆ ಆಫ್ರಿಕಾ ಹಾಗೂ ಏಷ್ಯಾಗಳಲ್ಲಿನ ಸ್ತ್ರೀಯರು ಇಪ್ಪತ್ತನೇ ಶತಮಾನದ ದ್ವಿತೀಯಾರ್ಧದಲ್ಲಿಯೂ ಪುರುಷರಿಗೆ ಸರಿಸಮಾನವಾದ ಅಂತಸ್ತನ್ನು ಪಡೆಯುವುದು

ಸಾಧ್ಯವಾಗಲಿಲ್ಲ. ಅನೇಕ ಬಗೆಯ ಅನರ್ಹತೆಗಳ ಆರೋಪಗಳನ್ನು ಹೊತ್ತ ಸ್ತ್ರೀಯರ ಶೋಷಣೆ ಒಂದಲ್ಲ ಒಂದು ರೀತಿಯಲ್ಲಿ ನಡೆದೇ ಇತ್ತು. ಸ್ತ್ರೀಯರಿಗೆ ಲಿಂಗಾಧಾರಿತ ಕಾರಣಗಳಿಂದ ಪುರುಷರಿಗೆ ಸರಿಸಮಾನದ ಹಕ್ಕು ಹಾಗೂ ಅವಕಾಶಗಳನ್ನು ನಿರಾಕರಿಸಲಾಗಿತ್ತು. ಈ ಬೆಳವಣಿಗೆಯನ್ನು ಲಿಂಗ ತಾರತಮ್ಯತೆ ಎಂದು ಗುರುತಿಸಲಾಯಿತು. ವಿಶ್ವ ಸಂಸ್ಥೆ ಕೂಡ ತನ್ನ ಹಲವಾರು ಸಭೆ ಹಾಗೂ ಪ್ರಕಟಣೆಗಳಲ್ಲಿ ಈ ತಾರತಮ್ಯವನ್ನು ಆದಷ್ಟು ಬೇಗನೆ ಕೊನೆ ಗಾಣಿಸಬೇಕೆಂದು ಕರೆ ನೀಡಿತು. ಸ್ತ್ರೀಯರ ಯಾತನೆ, ಶೋಷಣೆ, ಅನಾದರ, ಅಸಡ್ಡೆ ಹಾಗೂ ಅಪಮಾನಗಳು ಇತಿಹಾಸಕ್ಕೆ ಸಂದು ಹೋದ ಸಂಗತಿಯಾಗಬೇಕೆಂದು ಸಾರಲಾಯಿತು.

ಸ್ತ್ರೀಯರ ಶೋಷಣೆ ನಿಂತು ಅವರು ಪುರುಷರಿಗೆ ಸರಿ ಸಮಾನವಾಗಿ ಜೀವಿಸುವಂತಹ ಪರಿಸ್ಥಿತಿ ನಿರ್ಮಾಣವಾಗಬೇಕೆಂಬ ಹಂಬಲ ವಿಶ್ವ ಸಂಸ್ಥೆಯ ಮೂಲಕ ಪ್ರಕಟವಾಗುತ್ತಲೇ ಇತ್ತು. ೧೯೭೫ರ ವರ್ಷವನ್ನು ಅದು 'ಅಂತಾರಾಷ್ಟ್ರೀಯ ಮಹಿಳಾ ವರ್ಷ' ವೆಂದು ಘೋಷಿಸಿದಾಗ ಅದರ ಕೆಲವು ಸದಸ್ಯ ರಾಷ್ಟ್ರಗಳು ಸ್ತ್ರೀಯರ ಕಡೆಗೆ ವಿಶೇಷ ದೃಷ್ಟಿ ಹರಿಸಿದವು. ಇದುವರೆವಿಗೂ ಕೇವಲ ಸ್ತ್ರೀಯರ ಸಮಸ್ಯೆಗಳ ನಿವಾರಣೆಗಾಗಿ (ಆರೋಗ್ಯ ವರ್ಧನೆ, ಪೌಷ್ಟಿಕ ಆಹಾರಾಂಶಗಳ ಅಗತ್ಯ ವಸ್ತುಗಳ ಪೂರೈಕೆಯ ಸಮಸ್ಯೆ, ಇತ್ಯಾದಿ) ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದ ದೇಶಗಳು ಅವರ 'ಅಭಿವೃದ್ಧಿ'ಯ ಕಡೆಗೆ ತಮ್ಮ ಲಕ್ಷ್ಯವನ್ನು ಹರಿಸಬೇಕೆಂದು ತಿಳಿಸಲಾಯಿತು.

೧೯೭೫ರ ವಿಶ್ವ ಸಂಸ್ಥೆಯ ಘೋಷಣೆಯ ಮುಂದುವರಿದ ಭಾಗವೆಂಬಂತೆ ೧೯೮೫ರಲ್ಲಿ ನೈರೋಬಿಯದಲ್ಲಿ ಜರುಗಿದ ಮೂರನೆಯ 'ಸ್ತ್ರೀಯರ ಜಾಗತಿಕ ಮಹಾಸಭೆ' ಯಲ್ಲಿ 'ಮಹಿಳಾ ಸಶಕ್ತೀಕರಣ'ದ ಪ್ರಯತ್ನವನ್ನು ನಡೆಸಬೇಕೆಂದು ಬಲವಾದ ಶಿಫಾರಸು ಮಾಡಲಾಯಿತು.

ಕ್ರಿ.ಶ.೨೦೦೦ದ ಜೂನ್‌ನಲ್ಲಿ ನ್ಯೂಯಾರ್ಕ್‌ನಲ್ಲಿ ವಿಶ್ವ ಸಂಸ್ಥೆಯ ಸಾಮಾನ್ಯ ಸಭೆಯ ವಿಶೇಷಾಧಿವೇಶನವೊಂದನ್ನು ಸಂಘಟಿಸಲಾಗಿದ್ದು ಆದರಲ್ಲಿ 'ಮಹಿಳೆ ಕುರಿತು ೨೧ನೇ ಶತಮಾನಕ್ಕಾಗಿ ಸಮಾನತೆ, ಅಭಿವೃದ್ಧಿ ಮತ್ತು ಶಾಂತಿ' ಎಂಬ ವಿಷಯದ ಕುರಿತಾಗಿ ಚರ್ಚಿಸಲಾಯಿತು. ''ಈ ಅಧಿವೇಶನದಲ್ಲಿ ಸದಸ್ಯ ರಾಷ್ಟ್ರಗಳ ಸರ್ಕಾರೇತರ ಸಂಘ ಸಂಸ್ಥೆಗಳು ಭಾಗವಹಿಸಿದ್ದು ಇವು ಲಿಂಗ ಸಮಾನತೆಯನ್ನು ಸ್ಥಾಪಿಸುವಲ್ಲಿ ತಮ್ಮ ತಮ್ಮ ದೇಶಗಳಲ್ಲಿ

ನಡೆಸಲಾದ ಕಾರ್ಯಕ್ರಮಗಳ ಪ್ರಗತಿಯನ್ನು ಮೌಲ್ಯಮಾಪನ ಮಾಡಲು ಅವಕಾಶ ನೀಡಲಾಯಿತು''೧.

ಈ ಜಾಗತಿಕ ಸಮ್ಮೇಳನದಲ್ಲಿ ಬಿಡುಗಡೆ ಮಾಡಲಾಗಿದ್ದ ಪ್ರಕಟಣೆಗಳನ್ನು ಆಧಾರವಾಗಿಟ್ಟುಕೊಂಡು ಭಾರತದಲ್ಲಿಯೂ 'ಮಹಿಳೆಯರ ಸಶಕ್ತೀಕರಣ'ಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯ ಪ್ರಕಟಣೆಯೊಂದನ್ನು ಮಾಡಲಾಯಿತು. ಕ್ರಿ.ಶ.೨೦೦೧ನೇ ವರ್ಷವನ್ನು 'ಮಹಿಳಾ ಸಶಕ್ತೀಕರಣ ವರ್ಷ' ಎಂದು ಘೋಷಿಸಲಾಯಿತು. ಈ ಪ್ರಕಟಣೆಯಲ್ಲಿ ಸ್ತ್ರೀಯರ ಅಭಿವೃದ್ಧಿಯನ್ನು ಸಾಧಿಸುವುದರ ಮೂಲಕ ಅವರನ್ನು ಸಬಲಗೊಳಿಸುವ ಕಾರ್ಯತಂತ್ರಗಳ ಬಗ್ಗೆಯೂ ಪ್ರಸ್ತಾಪಿಸಲಾಗಿದೆ.

೧. ಸ್ತ್ರೀಯರ ರಾಜಕೀಯ ಸಹಭಾಗಿತ್ವವನ್ನು ಪಡೆಯಲು ಚುನಾವಣೆಗಳಲ್ಲಿ ಕನಿಷ್ಠ ಶೇ.೩೩ರಷ್ಟು ಸ್ಥಾನಗಳನ್ನು ಅವರಿಗಾಗಿ ಮೀಸಲಿಡಬೇಕು. ಮಾತ್ರವಲ್ಲ ಕೆಲವೊಂದು ಅಧಿಕಾರದ ಹುದ್ದೆಗಳನ್ನು ಬ್ಲಾಕುಗಳ ಹಾಗೂ ಗ್ರಾಮಗಳ ಹಂತದ ನೌಕರ ಶಾಹಿಯಲ್ಲಿಯೇ ಸ್ತ್ರೀಯರಿಗಾಗಿ ಮೀಸಲಿರಿಸಬೇಕು.

೨. ಆರ್ಥಿಕ ರಂಗದಲ್ಲಿ ಆದಾಯ ನೀಡುವಂತಹ ಕೆಲವೊಂದು ಹೊಸ ಯೋಜನೆಗಳನ್ನು ಸ್ತ್ರೀಯರಿಗಾಗಿ ಜಾರಿಗೊಳಿಸಬೇಕು. ಜೊತೆಗೆ ಗ್ರಾಮಾಭಿವೃದ್ಧಿಯ ದೃಷ್ಟಿಯಿಂದ ಕೈಗೊಳ್ಳಲಾದ ಎಲ್ಲಾ ಅಭಿವೃದ್ಧಿ ಯೋಜನೆಗಳಲ್ಲೂ ಒಂದು ನಿರ್ದಿಷ್ಟ ಸಂಖ್ಯೆಯ ಸ್ತ್ರೀಯರು ಅವುಗಳ ಫಲಾನುಭವಿಗಳಾಗುವಂತೆ ನೋಡಿಕೊಳ್ಳುವುದು.

೩. ಸಾಮಾಜಿಕ ರಂಗದಲ್ಲಿ ಸರ್ಕಾರೀ ಹಾಗೂ ಸರ್ಕಾರೇತರ ಸಂಸ್ಥೆಗಳ ಸಹಯೋಗದೊಂದಿಗೆ ಸ್ತ್ರೀಯರ ಸಾಕ್ಷರತೆಯನ್ನು ಗಣನೀಯವಾಗಿ ಹೆಚ್ಚಿಸುವುದು. ಶೈಕ್ಷಣಿಕ ಜಾಗೃತಿಯೊಂದಿಗೆ ಅವರು ಸ್ವಾವಲಂಬಿ ಜೀವನವನ್ನು ನಡೆಸಲು ಅನುವು ಮಾಡಿಕೊಡುವುದು.

ಭಾರತದ ಜನಸಂಖ್ಯೆಯ ಸುಮಾರು ಅರ್ಧದಷ್ಟಿರುವ ಸ್ತ್ರೀಯರಿಗೆ ಸಮಾನ ಹಕ್ಕುಗಳು, ಅವಕಾಶಗಳು, ಹೊಣೆಗಾರಿಕೆಗಳು ಹಾಗೂ ಅಧಿಕಾರ ಸ್ಥಾನಗಳನ್ನು ನೀಡುವುದರ ಮೂಲಕ ಮಾತ್ರ ಅವರನ್ನು ಸಬಲಗೊಳಿಸುವುದು ಸಾಧ್ಯವೆಂಬುದನ್ನು ಇಂದು ಬಲವಾಗಿ ನಂಬಲಾಗಿದೆ. ಲಿಂಗತಾರತಮ್ಯತೆ ಮತ್ತು ಲಿಂಗ ಅನರ್ಹತೆಗಳು ದೇಶಾದ್ಯಂತ ಕಾಣಬರುತ್ತಿವೆ.

ಆದಾಗ್ಯೂ ಈ ನಿಟ್ಟಿನಲ್ಲಿ ಏಕರೂಪತೆ ಎಂಬುದಿಲ್ಲ. ಅಂದರೆ, ಈ ವಿಷಯದಲ್ಲಿ ಬಹಳಷ್ಟು ಪ್ರಾದೇಶಿಕ ವ್ಯತ್ಯಾಸಗಳಿವೆ. ಉದಾ:ದಕ್ಷಿಣ ಭಾರತದ ಸ್ತ್ರೀಯರು ಹೊಂದಿರುವಷ್ಟು ಸ್ವಾತಂತ್ರ್ಯ ಹಾಗೂ ಅವರಿಗಿರುವ ಗೌರವದ ಸ್ಥಾನ, ಅವರು ಪಡೆದಿರುವ ಶೈಕ್ಷಣಿಕಾರ್ಹತೆ ಉತ್ತರ ಭಾರತದ ಸ್ತ್ರೀಯರಿಗಿಲ್ಲ. ಉತ್ತರ ಭಾರತದಲ್ಲಿಯೂ ಕೂಡ ಬಿಹಾರ ಮತ್ತು ಒರಿಸ್ಸಾಗಳಲ್ಲಿನ ಸ್ತ್ರೀಯರು ಇನ್ನಷ್ಟು ಹಿಂದುಳಿದಿದ್ದು ಅವರ ಶೋಷಣೆ ನಡೆದಿದೆ. ದಕ್ಷಿಣ ಭಾರತದಲ್ಲಿ ಕೇರಳದ ಸ್ತ್ರೀಯರು ಶೈಕ್ಷಣಿಕವಾಗಿ ಬಹಳ ಮುಂದೆ ಸಾಗಿದ್ದರೆ ತಮಿಳುನಾಡಿನಲ್ಲಿ ಮಹಿಳಾ ಸಾಕ್ಷರತೆ ಅದೇ ಪ್ರಮಾಣದಲ್ಲಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ಸ್ತ್ರೀಯರು ಪುರುಷರಿಗೆ ಎಲ್ಲಾ ರೀತಿಗಳಲ್ಲೂ ಸರಿಸಮಾನವಾಗಿ ಎಂಬಂತೆ ವ್ಯವಹರಿಸುವ ವಾತಾವರಣ ಅಥವಾ ಪರಿಸ್ಥಿತಿ ಭಾರತದ ಯಾವುದೇ ಭಾಗದಲ್ಲೂ ಇಲ್ಲ. ಈ ಹಿನ್ನೆಲೆಯಲ್ಲಿ ಸಶಕ್ತೀಕರಣ ಪ್ರಕ್ರಿಯೆಗೆ ಬಹಳಷ್ಟು ಮಹತ್ವವಿದೆ.

ಭಾರತದಂತಹ ಬೃಹತ್ ದೇಶದಲ್ಲಿ 50 ಕೋಟಿಗೂ ಅಧಿಕ ಸಂಖ್ಯೆ ಸ್ತ್ರೀಯರಿರುವಾಗ ದೇಶದ ಮುನ್ನಡೆಯಲ್ಲಿ ಅವರ ಪಾತ್ರವನ್ನು ಗುರುತಿಸುವ, ಅವರ ಪಾತ್ರ ನಿರ್ವಹಣೆಗೆ ಸೂಕ್ತ ಅವಕಾಶ ನಿರ್ಮಿಸುವುದು ತೀವ್ರವಾಗಿದೆ. ಈ ನಿಟ್ಟಿನಲ್ಲಿ ಮಹಿಳಾ ಸಶಕ್ತೀಕರಣದ ಕಾರ್ಯಕ್ಕೆ ಬಹಳ ಮಹತ್ವವಿದೆ.

ಈ ಕೆಳಗಿನ ಅಂಶಗಳು ಸ್ತ್ರೀ ಸಶಕ್ತೀಕರಣಕ್ಕೆ ಸಹಾಯವಾಗಿವೆ:

೧. ಸ್ತ್ರೀಯರ ಹಕ್ಕುಗಳನ್ನು ಒಪ್ಪಿಕೊಳ್ಳುವುದು:- ಸ್ತ್ರೀ ಪುರುಷ ಸಮಾನತೆಯ ಯುಗದಲ್ಲಿ ಸ್ತ್ರೀಯರಿಗೂ ಪುರುಷನಷ್ಟೇ ಸಮಾನವಾದ ಹಕ್ಕುಗಳಿವೆ ಎಂಬುದನ್ನು ಗುರುತಿಸಿ ಗೌರವಿಸುವುದು.

೨. ನಿರ್ಧಾರ ತೆಗೆದುಕೊಳ್ಳುವಲ್ಲಿನ ಸ್ವಾತಂತ್ರ್ಯ: ಸ್ತ್ರೀಯರಿಗೂ ತಮ್ಮ ಶಿಕ್ಷಣ ವಿವಾಹ, ವೃತ್ತಿ, ಮಕ್ಕಳನ್ನು ಪಡೆಯುವಿಕೆ ಇಂತಹ ವಿಚಾರಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ಸ್ವಾತಂತ್ರ್ಯವಿರಬೇಕು.

೩. ಶಿಕ್ಷಣ ಹಾಗೂ ಉದ್ಯೋಗಕ್ಕೆ ಅವಕಾಶ: ಕೇವಲ ಆಶಯಗಳಿಂದ ಹಾಗೂ ನಿರೀಕ್ಷೆಗಳಿಂದ ಯಾರೂ ತೃಪ್ತಿಪಡಲಾರರು. ಸ್ತ್ರೀಯರಿಗೆ ಅವರ ಆಸೆ-ನಿರೀಕ್ಷೆಗಳು ಫಲದಾಯಕವಾಗಲು ಸಹಾಯಕವಾದ ಶಿಕ್ಷಣ ಪಡೆಯಲು ಹಾಗೂ ಉದ್ಯೋಗ ಕೈಗೊಳ್ಳಲು

ಸೂಕ್ತ ಅವಕಾಶ ಹಾಗೂ ಸ್ವಾತಂತ್ರ್ಯವಿರಬೇಕು.

ಬಡ ಮತ್ತು ದುರ್ಬಲ ವರ್ಗಕ್ಕೆ ಸೇರಿದ ಸ್ತ್ರೀಯರನ್ನು ಸಶಕ್ತರನ್ನಾಗಿಸುವುದರಿಂದ ಸಮಾಜದ ಮೇಲೆ ಬಹುಮುಖವಾದ ಪರಿಣಾಮಗಳಾಗುತ್ತವೆ. ಉದಾ: ಆಕೆಯ ಬಗ್ಗೆ ಮನೆಯಲ್ಲಿ ಗೌರವ ಸಿಗುವುದು, ಮನೆಯ ಹಿರಿಯರು, ಗಂಡ, ನೆರೆ ಹೊರೆಯವರು, ಗ್ರಾಮಸ್ಥರು ಆಕೆಯನ್ನು ಗೌರವದಿಂದ ಕಾಣುವರು. ಆಕೆಯ ಮಾತನ್ನು ಕೇಳುವರು, ಆಕೆಯ ನಿರ್ಧಾರಗಳನ್ನು ಗಮನಿಸುವರು. ಅವರಿಗೆ ಸ್ವಲ್ಪ ಸಾಮಾನ್ಯ ತಿಳುವಳಿಕೆ ಅಥವಾ ವ್ಯವಹಾರ ಜ್ಞಾನ ಇದ್ದರಂತೂ ಗ್ರಾಮದಲ್ಲಿ ಹಲವು ಕೆಲಸ ಕಾರ್ಯಗಳನ್ನು ತನ್ನ ಸದಸ್ಯತ್ವದ ಬಲದಿಂದ ಮಾಡಿಸಲು ಸಾಧ್ಯವಾಗುವುದು.

''೨೦೦೪ರ ಅಂಕಿ ಅಂಶಗಳಂತೆ ಪುರುಷರ ಸಾಕ್ಷರತಾ ಪ್ರಮಾಣ ೭೫ರಷ್ಟಿದ್ದರೆ ಸ್ತ್ರೀಯರು ಕೇವಲ ೫೪ರಷ್ಟು ಮಾತ್ರ'' [೨]. ಸ್ತ್ರೀಯರ ಅನಕ್ಷರತೆ ಅವರ ಬಹುದೊಡ್ಡ ದೌರ್ಬಲ್ಯವಾಗಿದ್ದು ಅವರ ಶೋಷಣೆಗೆ ಕಾರಣವಾಗಿದೆ. ಅಂತೆಯೆ ಅವರಲ್ಲಿ ಸಾಕ್ಷರತೆಯನ್ನು ಹೆಚ್ಚಿಸುವುದೇ ಇದಕ್ಕೆ ತಕ್ಕದಾದ ಪರಿಹಾರವಾಗಿದೆ. ಸ್ತ್ರೀಯರ ಅನಾರೋಗ್ಯ, ಆರ್ಥಿಕ ದುರವಸ್ಥೆಗಳು, ಸ್ತ್ರಿಯರ ಮೇಲಿನ ದೌರ್ಜನ್ಯಗಳು ಇವುಗಳನ್ನು ಸ್ವಂತ ಬಲದ ಮೇಲೆ ಅಥವಾ ಸಂಘಟಿತ ಶಕ್ತಿಯಿಂದ ಎದುರಿಸಲು ಮಹಿಳಾ ಸಶಕ್ತಿಕರಣದ ಅವಶ್ಯಕತೆ ಇದೆ.

## ಅಡಿ ಟಿಪ್ಪಣಿಗಳು:

೧. ಚ.ನ.ಶಂಕರ್‌ರಾವ್ - ಭಾರತೀಯ ಸಮಾಜ. ಪುಟ - ೨೦೪

೨. ಅದೇ. ಪುಟ - ೨೦೭

# ಅಧ್ಯಾಯ: ೭

## ಸಮಾರೋಪ

ಸ್ತ್ರೀವಾದ ಮಹಿಳೆಯರನ್ನು ಒಂದು ಪ್ರಜ್ಞಾವಂತಿಕೆಯ ಪ್ರಕ್ರಿಯೆಯಾಗಿ ಹೊಸದಾಗಿ ಚಿತ್ರಿಸಬೇಕೆಂದು ಒತ್ತಾಯಿಸುತ್ತದೆ. 'ಹೆಣ್ತನ'ವನ್ನು ಕುರಿತು ಪಾರಂಪರಿಕವಾದ ಚಿತ್ರಣ, ನಂಬಿಕೆಗಳನ್ನು ತಿರಸ್ಕರಿಸಿ ಹೊಸ ಬದುಕಿನ ಸಂದರ್ಭದಲ್ಲಿ ಅವುಗಳನ್ನು ಕುರಿತ ಹೊಸ ಅಧ್ಯಯನ ದೃಷ್ಟಿಕೋನಗಳು ಅಗತ್ಯವಾಗಿದೆ.

'ಮಹಿಳಾ ಅಧ್ಯಯನ ಮಾದರಿ' ಎಂಬ ಈ ಪ್ರಬಂಧದಲ್ಲಿ ಮಹಿಳೆಯರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಅದು ಸಾಮಾಜಿಕ, ರಾಜಕೀಯ, ಆರ್ಥಿಕ, ಹೀಗೆ ಯಾವುದೇ ಹಿನ್ನೆಲೆಗಳಿಂದ ಮೂಡಿಬಂದಿದ್ದಾದರೂ ಅದರಲ್ಲಿ ಮಹಿಳೆಯ ಶೋಷಣೆಯೇ ಮುಖ್ಯಸ್ಥಾನ ಪಡೆದುಕೊಳ್ಳುವಂಥದ್ದು. ನಾವು ೨೧ನೇ ಶತಮಾನಕ್ಕೆ ಹೊಂದಿಕೊಂಡಿದ್ದರೂ ಕೂಡ ಪುರುಷರ ದಬ್ಬಾಳಿಕೆಗಳಿಂದ ಮುಕ್ತಿಯನ್ನು ಪಡೆದಿಲ್ಲ. ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಎಲ್ಲಾ ಸ್ತರಗಳಲ್ಲೂ ಪುರುಷನಷ್ಟೇ ಮಹಿಳೆಯು ಸ್ವಾವಲಂಬಿಯಾಗಬೇಕೆಂದು ಈ ಅಧ್ಯಯನದ ಆಶಯ. ಗ್ರಂಥಗಳ ಅವಲೋಕನ, ಹಿರಿಯರ ಸಂದರ್ಶನ - ಈ ಎಲ್ಲಾ ಪಥ ಕ್ರಮಣದಲ್ಲಿ ನಾನು ತಿಳಿದು, ಸಂಬಂಧಿಸಿದ ಆಧಾರಗಳಿಂದ ಹುಡುಕಿ ತೆಗೆದ ವಿವರಗಳನ್ನು ಇಲ್ಲಿ ಪ್ರಚುರಪಡಿಸಿರುತ್ತೇನೆ.

ಎರಡನೆಯ ಅಧ್ಯಾಯವಾದ ಮಹಿಳಾ ಅಧ್ಯಯನದ ಹುಟ್ಟು ಬೆಳವಣಿಗೆಯ ವಿವರಣೆಯಲ್ಲಿ ವಿಸ್ತರ್ ಬೋಸ್‌ರಪ್, ಸಿಮೋನ್ ದಿ ಬೋವಾ ಅವರ ಕೊಡುಗೆ, ಭಾರತದಲ್ಲಿ ಮಹಿಳೆಯರ ಪರವಾಗಿ ಶ್ರಮಿಸಿದ ಗಾಂಧೀಜಿ, ಜ್ಯೋತಿರಾವ್ ಪುಲೆ, ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ವಿಚಾರಗಳು, ಭಾರತದಲ್ಲಿ ಮೊಟ್ಟ ಮೊದಲು ಸ್ಥಾಪನೆಗೊಂಡು ಮಹಿಳಾ ವಿಶ್ವವಿದ್ಯಾಲಯಗಳನ್ನು ಕುರಿತು ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವೇದಗಳಲ್ಲಿ ಮಹಿಳೆಯರ ಸ್ಥಾನವು ಗೌರವಯುತವಾಗಿದ್ದು ನಂತರ ದುಃಸ್ಥಿತಿಗಿಳಿದ ವಿಚಾರಗಳು , ಪುರಾಣ, ಮಹಾಕಾವ್ಯಗಳಲ್ಲಿ ಮಹಿಳೆಯ ಪರಿಸ್ಥಿತಿಗಳು ಹೇಗಿದ್ದವು? ಅವುಗಳಲ್ಲಿರುವ ಕೆಲವು ಅಂಶಗಳು ಇಂದಿಗೂ ಅನ್ವಯಿಸುವಂತಹ ವಿಚಾರಗಳನ್ನು ಗುರುತಿಸಲಾಗಿದೆ.

ನಾಲ್ಕನೆ ಅಧ್ಯಾಯದಲ್ಲಿ ಬಹುಪ್ರಾಚೀನ ಕಾಲದಿಂದಲೂ ಕಂಡು ಬಂದ ಮಹಿಳಾ ಸಮಸ್ಯೆಗಳು ಮುಂದುವರಿದು ಅವುಗಳಲ್ಲಿ ಕೆಲವು ಸುಧಾರಿಸಿರುವುದನ್ನು, ಇನ್ನು ಕೆಲವು ಸಮಸ್ಯೆಗಳು ಹೆಚ್ಚಾಗಿರುವುದನ್ನು ನೋಡಬಹದು. ಅವುಗಳೆಂದರೆ ಸತಿ ಪದ್ಧತಿ, ಶಿಶುಹತ್ಯೆ, ಅತ್ಯಾಚಾರ, ಬಾಲ್ಯವಿವಾಹ, ವರದಕ್ಷಿಣೆ ಕುರಿತ ವಿಷಯಗಳನ್ನು ಪ್ರಸ್ತಾಪಿಸಿದ್ದೇನೆ.

ಐದನೆಯ ಅಧ್ಯಾಯದಲ್ಲಿ ಸ್ತ್ರೀಯರ ಸ್ಥಾನಮಾನಗಳು ಸಂವಿಧಾನದಿಂದ ಬದಲಾಗುವ ಕೆಲವು ಕಾಯ್ದೆಗಳನ್ನು ಕುರಿತು ಹಾಗೂ ಮಹಿಳೆ ಶಿಕ್ಷಣ, ಉದ್ಯೋಗ, ರಾಜಕಾರಣ ಮತ್ತು ಮಾಹಿತಿ ತಂತ್ರಜ್ಞಾನ ಮತ್ತು ಜಾಗತೀಕರಣದಲ್ಲಿ ಎಷ್ಟು ಸಫಲಳಾಗಿದ್ದಾಳೆ ಎಂಬುದು ತಿಳಿಯುತ್ತದೆ.

ಕೊನೆಯದಾಗಿ ಮಹಿಳೆಗೆ ಬಹಳ ಮುಖ್ಯವಾಗಿ ಸಬಲೀಕರಣಕ್ಕೆ ಬೇಕಾಗಿರುವ ವಿವಿಧ ಹಂತದ ಚಳುವಳಿಗಳು, ಹೋರಾಟಗಳನ್ನು ಕುರಿತು ವಿಚಾರಗಳನ್ನು ಮನಗಾಣಿಸಿದೆ.

ಒಟ್ಟಾರೆ ಮಹಿಳಾ ಅಧ್ಯಯನವು ಸೀಮಿತ ವ್ಯಾಪ್ತಿಯನ್ನು ಪಡೆದುಕೊಂಡಿಲ್ಲ. ಸಾಗರದಷ್ಟು ವಿಸ್ತಾರವಾದ ವ್ಯಾಪ್ತಿಯನ್ನು ಪಡೆದಿದೆ. ಆದರೆ ಈ ಪ್ರಬಂಧದಲ್ಲಿ ಮಹಿಳಾ ಅಧ್ಯಯನವನ್ನು ಯಾವ ಯಾವ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಬಹುದು ಎಂಬುದನ್ನು ಸೀಮಿತ ವ್ಯಾಪ್ತಿಯೊಳಗೆ, ಒಂದು ಚೌಕಟ್ಟಿನೊಳಗೆ ತರಲಾಗಿದೆ.

ಪ್ರತಿ ಮಹಿಳೆಯು ಅಂದರೆ ಗ್ರಾಮೀಣ ಪ್ರದೇಶ ಅಥವಾ ನಗರ ಪ್ರದೇಶದ ಮಹಿಳೆಯಾರಾದರಾಗಲಿ 'ಮಹಿಳಾ ಅಧ್ಯಯನ'ದ ಬಗ್ಗೆ ಆಸಕ್ತಿ ಹೊಂದಿ ಇಲ್ಲಿಯವರೆಗೂ ಆಗಿರುವ ಮಹಿಳೆಯ ಶೋಷಣೆ, ದೌರ್ಜನ್ಯಗಳನ್ನು ತಿಳಿದು, ಅವುಗಳಿಂದ ವಿಮುಕ್ತಿ ಪಡೆಯಲು ಎಚ್ಚೆತ್ತುಕೊಳ್ಳಬೇಕು ಎಂಬ ಆಶಯವನ್ನು ಈ ಪ್ರಬಂಧ ಒಳಗೊಂಡಿದೆ.



# ಪರಾಮರ್ಶನ ಗ್ರಂಥಗಳು


೧. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಡಾ|| ಎಚ್.ತಿಪ್ಪೇರುದ್ರಸ್ವಾಮಿ. ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, ೨೦೦೩.

೨. ಕನ್ನಡ ಸಾಹಿತ್ಯ ಮತ್ತು ಮಹಿಳೆ. ಸಂಪಾದಕರು - ಡಾ.ಸಬಿಹಾ ಭೂಮಿಗೌಡ, ಡಾ||ಮಲ್ಲಿಕಾ ಘಂಟಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬.

೩. ಪುರಾಣ ಭಾರತ ಕೋಶ, ಯಜ್ಞನಾರಾಯಣ ಉಡುಪ, ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೯೭.

೪. ಭಾರತೀಯ ಸಮಾಜ. ಚ.ನ.ಶಂಕರ್‌ರಾವ್, ಜೈ ಭಾರತ್ ಪ್ರಕಾಶನ, ಮಂಗಳೂರು, ೨೦೦೬.

೫. ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು. ಡಾ|| ಎಂ.ಉಷಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೬. ಮಹಿಳಾ ಸಾಮಾಜಿಕತೆ, ಡಾ|| ಜ್ಯೋತಿ ಶಶಿಕುಮಾರ್. ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಮಹಿಳಾ ಅಧ್ಯಯನದ ಆಯಾಮಗಳು. ಸಂಪಾದಕ - ಡಾ|| ರಾ.ಗೌ.ಶ್ರೀಮತಿ ಯೋಶೋಧಾಗೌಡ ಟ್ರಸ್ಟ್, ಮೈಸೂರು, ೨೦೦೮.

೮. ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ. ಡಾ|| ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಮೈಸೂರು, ೨೦೦೭.

೯. ಮಹಿಳಾ ಅಧ್ಯಯನ - ೧.೨.೩.೪, ಡಾ|| ಹೇಮಲತಾ ಎಚ್.ಎಂ. ಪ್ರಕಾಶಕರು ಡಿ.ವಿ.ಕೆ.ಮೂರ್ತಿ, ಮೈಸೂರು, ೨೦೦೭.

೧೦. ಮಹಿಳಾ ಅಧ್ಯಯನ, ನೇಮಿಚಂದ್ರ, ಅಂಕಿತ ಪುಸ್ತಕ, ೨೦೦೧.

೧೧. ಯುಗಯಾತ್ರೀ ಭಾರತೀಯ ಸಂಸ್ಕೃತಿ - ಸಂಪುಟ -೧, ಪ್ರಧಾನ ಸಂಪಾದಕರು, ಡಾ.ಕೆ.ವಿ.ಪುಟ್ಟಪ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೦.

೧೨. ಸ್ತ್ರೀವಾದ - ಡಾ.ಎಚ್.ಎಸ್.ಶ್ರೀಮತಿ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

೧೩. ಸ್ತ್ರೀ ಮುಕ್ತಿ ಚಿಂತನೆ: ಒಂದು ಅಧ್ಯಯನ, ಡಾ. ಗೀತಾ ಶೆಣೈ, ಸ್ವಾಗತ ಸಮಿತಿ, ಆರನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ, ಮಂಡ್ಯ, ೨೦೦೭.

೧೪. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಡಾ|| ಡಿ.ಮಂಗಳಾ ಪ್ರಿಯದರ್ಶಿನಿ, ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.



